ಸರಸ್ವತಿ ಗ್ರಂಥಮಾಲೆಯ ಎರಡನೆಯ ಕುಸುಮ

# ಯದ್ವಾ - ತದ್ವಾ

(ಹಾಸ್ಯ ಪ್ರಬಂಧಗಳ ಸಂಗ್ರಹ)

ಬರೆದವರು :

ಶ್ರೀಮಾನ್ ಎನ್. ಕಸ್ತೂರಿ, ಎಂ.ಎ., ಬಿ.ಎಲ್.

ಚರಿತ್ರೆಯ ಉಪನ್ಯಾಸಕರು, ಮಹಾರಾಜರವರ ಕಾಲೇಜು, ಮೈಸೂರು

ಶ್ರೀಮಾನ್ ನಾ. ಕ. ರವರ ಮುನ್ನುಡಿ ಸಹಿತ

ಪ್ರಕಾಶಕರು :

ಸರಸ್ವತಿ ಪುಸ್ತಕ ಭಂಡಾರ

ಮಂಡ್ಯ

ಮೊದಲನೆಯ ಮುದ್ರಣ

೧೯೩೯ ಬೆಲೆ ಆರಾಣೆ

# ಮುನ್ನುಡಿ

---

ಶ್ರೀಮಾನ್ ಕಸ್ತೂರಿಯವರನ್ನು ನಾನು ಮೂರು ನಾಲ್ಕು ದಶಮಾನ ಗಳಿಂದಲೂ ಬಲ್ಲೆ. "ನಾ. ಕ. ರವರು ನನ್ನ ಆಪ್ತ ಸ್ನೇಹಿತರು" ಎಂದು ಅವರು ಆಗಾಗ ಆಡಿಕೊಳ್ಳುತ್ತಾರೆ. ಅವರ ಕಷ್ಟಸುಖಗಳಲ್ಲಿ ಭಾಗಿಯಾಗುವ ಭಾಗ್ಯವು ಇತರರಿಗಿಂತ ಹೆಚ್ಚಾಗಿ ನನಗೆ ದೊರೆತಿದೆ. ಕೈಬರಹದಲ್ಲಿದ್ದಾಗಲೇ "ಯದ್ವಾ – ತದ್ವಾ" ಗ್ರಂಥವನ್ನು ನಾನು ಓದಿ ಮೆಚ್ಚಿ ಕೆಲವು ಸೂಚನೆ ಗಳನ್ನು ಗ್ರಂಥಕರ್ತರಿಗೆ ಕೊಟ್ಟಿರುವೆನಾದ್ದರಿಂದ ಈ ಪುಸ್ತಕದಲ್ಲಿ ಕಾಣಬಹು ದಾದ ದೋಷಗಳೆಲ್ಲವೂ ನನ್ನದು ಎಂದು ಒಪ್ಪಿಕೊಳ್ಳದೆ ವಿಧಿಯಿಲ್ಲ. ನಮ್ಮ ಡೊಂಕು, ನಮ್ಮ ಜಂಬ, ನಮ್ಮ ಠೀವಿ ಇವುಗಳನ್ನು ನೋಡಿ ಇತರರು ನಗು ವುದಕ್ಕೆ ಮುಂಚೆ ನಾವೇ ನಕ್ಕು ಸಂತೋಷಪಡಬೇಕೆಂಬುದೇ ಶ್ರೀಮಾನ್ ಕಸ್ತೂರಿಯವರ ಮತ. ಆದರೆ ಈ ಗ್ರಂಥದಲ್ಲಿ ತುಂಬಿ ತುಳುಕುತ್ತಿರುವ ಅವರ ಚುಚ್ಚು ಹಾಸ್ಯವು ಯಾರನ್ನೂ ನೇರವಾಗಿ ನೋಯಿಸುವ ಉದ್ದೇಶ ದಿಂದ ಬರೆದದ್ದಲ್ಲವೆಂದು ನಾನು ಭರವಸೆ ಕೊಡುತ್ತೇನೆ.

ಮುದ್ರಣದ ತಪ್ಪುಗಳನ್ನು ತಿದ್ದುವ ನೀರಸವಾದ ಕೆಲಸಕ್ಕೆ, ಎಷ್ಟು ಬೇಡವೆಂದರೂ, ಗ್ರಂಥಕರ್ತರು ನನ್ನನ್ನೇ ನಿಯಮಿಸಿದರು. ಅವರ ಮೇಲೆ ಸೇಡು ತೀರಿಸುವ ಸಲುವಾಗಿ ನಾನು ಮುದ್ರಾರಾಕ್ಷಸನಿಗೆ ಕೊಂಚ ಹೆಚ್ಚಾ ಗಿಯೇ ಅವಕಾಶ ಕೊಟ್ಟಿದೇನೆ. ವಾಚಕರು ಕ್ಷಮಿಸಬೇಕು. ಉದಾಹರಣೆ ಗಾಗಿ ಪುಟ ೧೮–ಗೋಪಾಲಯ್ಯನನ್ನು (ಗೋಪಾಲಯ್ಯನಿಗೆ); ೨೩–ಬರಿಯ ದಾಗಿ ಹೋಯಿತು (ಬರಿಯ ಇದಾಗಿಹೋಯಿತು); ೫೮–ಪುನರಾರ್ಯ (ಪುನರಾರ್ಯಾ); ೬೬–ಲಟಲಟರೆಂಬುವ (ತಿಂಬುವ); ೭೨–ಮನಿಶೆಟ್ಟರು (ಮಸಿಶೆಟ್ಟರು); ೭೬–ಅಂದಿನಾನಿರಿಯಿಲ್ಲ (ಅಂದಿನಾಸಿರಿಯಿಲ್ಲ) ಇತ್ಯಾದಿ.

ಕಡೆಯದಾಗಿ ಒಂದು ಗುಟ್ಟಿನ ಮಾತು. ಕನ್ನಡಿಗರಿಗೆ ಶ್ರೀಮಾನ್ ಕಸ್ತೂರಿಯವರಷ್ಟು ಪರಿಚಿತನಲ್ಲದ ನಾನು ಈ ಗ್ರಂಥಕ್ಕೆ ಏಕೆ "ಮುನ್ನುಡಿ"

ಬರೆಯುವ ದುರಹಂಕಾರಕ್ಕೆ ಹೊರಟೆ, ಎಂಬ ಪ್ರಶ್ನೆ ಏಳಬಹುದು. ಶೀಘ್ರ ವಲ್ಲೇ ಹೊರಬೀಳಲಿರುವ ನನ್ನ ಒಂದು ಉದ್ಗ್ರಂಥಕ್ಕೆ ಶ್ರೀವರ್ಮಾ ಕಸ್ತೂರಿ ಯವರು ಅಮೋಘವಾದ ಒಂದು ಮುನ್ನುಡಿಯನ್ನು ಬರೆದುಕೊಡುತ್ತೇನೆ ಎಂದು ವಾಗ್ದಾನ ಮಾಡಿದಾರೆ. ಈಗಿನ ಕಾಲದಲ್ಲಿ ನಮಗೆ ನಾವೇ ನೆರೆ; ನಮಗೆ ನಾವೇ ಹೊರೆ.

"ಕಲ್ಪತರು"
ಕೃಷ್ಣಮೂರ್ತಿಪುರಂ

ನಾ. ಕ.

# " ಅಥಾತೋ ಗ್ರಂಥಜಿಜ್ಞಾಸಾ "

" ' ಯದ್ವಾ-ತದ್ವಾ ' ಎಂಬ ಪುಸ್ತಕವನ್ನು ಓದಿದಿರಾ ?" " ಇಲ್ಲ. ಎಲ್ಲಿಯೂ ಸಿಕ್ಕಲಿಲ್ಲ ಕನ್ನಡ ಪುಸ್ತಕಗಳನ್ನು ಕೊಂಡುಕೊಳ್ಳುವ ಅಭ್ಯಾಸವೇ ಇಲ್ಲ, ನನಗೆ. ಯಾವುದಾದರೂ ಲೈಬ್ರರಿಯಲ್ಲಿದ್ದರೆ, ಯಾರಾದರೂ ಮೆಂಬರನ್ನು ಹಿಡಿದು, ಅವರ ಮೂಲಕ ತರಿಸಿ, ಓದುವುದು ; ಅಥವಾ, ಯಾರಿಂದಲಾದರೂ ಎರವಲು ತಂದು, ಚೆನ್ನಾಗಿದ್ದರೆ, ಹಿಂದಕ್ಕೆ ಕೊಡಲು ಮರೆತು ಬಿಡುವುದು-ಇದೇ ನನ್ನ ಪದ್ಧತಿ ! ನಿಮ್ಮಲ್ಲಿ ಇದೆಯೇನು, ಯದ್ವಾ-ತದ್ವಾ?" "ನೀವು ಇಷ್ಟು ಹೇಳಿದಮೇಲೆ, ಇದೆ ಅಂತ ಹೇಳುತ್ತೇನೆಯೇ?" "ಹೋಗಲಿ! ಅದರಲ್ಲಿರುವ ವಿಷಯವನ್ನಾದರೂ ಹೇಳಬಾರದೆ ?" " ಅಗತ್ಯವಾಗಿ. ಅದಕ್ಕೇನು ? ನಾ. ಕಸ್ತೂರಿ, ಅಂತ ಕೇಳಿದೀರೋ ? ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಚರಿತ್ರೆಯ ಉಪನ್ಯಾಸಕರಾಗಿದಾರೆ, ಈಗ. ಅವರು ಹಿಂದೆ ಯೂನಿಯನ್ ಪತ್ರಿಕೆಯಲ್ಲೂ, ನಗುವನಂದ, ಕತೆಗಾರ ಮುಂತಾದವುಗಳಲ್ಲೂ ತಂತಮಾಷೆಯಾಗಿ ಯಾವುಯಾವುದೋ ಬರೆದಿದ್ದರು. ಅದನ್ನೆಲ್ಲಾ ಸೇರಿಸಿ, ' ಯದ್ವಾ-ತದ್ವಾ ' ಮಾಡಿಬಿಟ್ಟಿದಾರೆ." " ಅಷ್ಟೆತಾನೆ ? ಹಾಗಾದರೆ, ನಾನು ಆ ಪತ್ರಿಕೆಗಳನ್ನೇ ಹುಡುಕಿ ಓದಿಕೊಳ್ಳುತ್ತೇನೆ." " ಅದಾಗುವುದಿಲ್ಲ. ಇದುವರೆಗೂ ಅಚ್ಚಾಗದ ಐದಾರು ಹಾಸ್ಯದ ಚಟಾಕಿಗಳೂ ಈ ಪುಸ್ತಕದಲ್ಲಿವೆ " " ಚಟಾಕಿ ! ಹಾಗಂದರೇನು ?" " ಓದಿನೋಡಿದರೆ ತಿಳಿಯುತ್ತೆ ... ...ಪುಟ್ಟಪ್ಪನವರ 'ಕಲ್ಕಿ'ಯನ್ನು ಅಣಕಿಸಿ, 'ಘುಂಕೀ' ಅಂತ ಒಂದು ಪದ್ಯ ಬರೆದಿದಾರೆ. ಅದನ್ನೋದಿದರೆ, ದೇವರೇಗತಿ. ನಿಮ್ಮ ಕಾಲೇಜು ಅನುಭವ ಎಲ್ಲವೂ ಕಣ್ಣಿಗೆ ಕಟ್ಟಿದಹಾಗಾಗುತ್ತದೆ." " ನನಗೆ ಘುಂಕಿ ಆದದ್ದು ಎರಡೇ ಸಲ !" " ಚಿಂತೆಯಿಲ್ಲ .. ...ಮೊನ್ನೆ ನಾನು ಕಸ್ತೂರಿಗಳನ್ನು ಕಂಡಿದ್ದೆ. ' ನಿಮ್ಮ ಸರ್ವಜ್ಞನ ಪದಗಳು ಚೆನ್ನಾಗಿತ್ತಲ್ಲಾ, ಯಾಕೆ ಯದ್ವಾ - ತದ್ವಾದಲ್ಲಿ ಹಾಕಲಿಲ್ಲ ' ಅಂದೆ ... ..." " ಏನು ? ಅವರೂ ಸರ್ವಜ್ಞ........?" " ಓಹೊ ! ಈಗಿನ ಕಾಲದಲ್ಲೇನು, ಪ್ರತಿಯೊಬ್ಬರೂ ಸರ್ವಜ್ಞರೇ !" " ಒಂದೆರಡು ಪದ ಹೇಳಿ, ಕೇಳೋಣ !" " ಮೊತ್ತಮೊದಲು ನಿಮ್ಮ ವಿಷಯವಾಗಿಯೇ ಒಂದನ್ನು ಬರೆದಿದ್ದಾರೆ—

ಎಲ್ಲ ಕಗ್ಗವಗೀಚಿ, ಕನ್ನಡಂಗೆಲ್ಗೆಂದು
ಹಲ್ಲು ಕಿರಿದಾಕೆಗೆ ಕೊಡುವಾತ, ಕೇಸರಿಗೆ
ಹುಲ್ಲು ಕೊಟ್ಟಂತೆ, ಸರ್ವಜ್ಞ.

ಕೋಪಿಸಿಕೊಳ್ಳಬೇಡಿ. ನೀವು ಸಾಮಾನ್ಯವಾಗಿ ಆಡುತ್ತೀರಲ್ಲಾ, ಬೆರಕೆ ಭಾಷೆ, ಅವರ ವಿಷಯವಾಗಿಯೂ ಒಂದಿದೆ—

ಕನ್ನಡದಿ ಇಂಗ್ಲೀಷ ಕಿಂಚಿತ್ತು ಬೆರಸಲದು
ಸಿಸ್ಸುಗಳ ಲಿಸ್ಟಿನಲಿ ಹೈಯೆಸ್ಟು, ಅದರಿಂದ
ಫಸ್ಸಿಗೂ ಮಿಕ್ಸದಿರು, ಸರ್ವಜ್ಞ.

ಅಲ್ನೋಡಿ ! ಅವರೇ ಬಂದರು. ಬನ್ನಿ, ಕಸ್ತೂರಿಗಳೇ ! ನಿಮ್ಮ ಯದ್ವಾ-ತದ್ವಾ ವಿಷಯವನ್ನೇ ಮಾತನಾಡುತ್ತಿದ್ದೆವು" "ಹಾಗಾದರೆ, ನಾನು ಕೊಂಚ ದೂರ ಇರುವುದೇ ಮೇಲು." "ಏಕೆ ?" "ನಿಮ್ಮ ಕೋಪವೆಲ್ಲವನ್ನೂ ನನ್ನ ಮೇಲೆ ತೋರಿಸಬೇಡಿ. ನನ್ನ ಸ್ನೇಹಿತರಿದಾರಲ್ಲಾ, ಎಸ್. ಶಿವರಾಮಶಾಸ್ತ್ರಿಗಳು, ಎ. ಎನ್. ಮೂರ್ತಿರಾಯರು, ಅವರೇ ನನ್ನನ್ನು "ಅಚ್ಚುಹಾಕಿಸಯ್ಯಾ, ಕನ್ನಡದಲ್ಲಿ ಇಂತಹ ಪುಸ್ತಕಗಳು ತೀರ ಕಡಿಮೆ" ಅಂತ ಮುಂದಕ್ಕೆ ನೂಕಿದ್ದು. ಸರಿ ! ಮಂಡ್ಯದ ಸರಸ್ವತಿ ಗ್ರಂಥಮಾಲೆಯಲ್ಲಿ, ಶ್ರೀನಿವಾಸರಾಯರು ಅದನ್ನು ಪ್ರಕಟಿಸಲು ಒಪ್ಪಿದರು. ನಾ. ಕ. ರವರದು ಒಂದು ಮುನ್ನುಡಿ, ಶ್ರೀಮಾನ್ ಕುಕ್ಕೆ ಅವರದು ಒಂದು ಚಿತ್ರ ಒದಗಿತು. ಅಂತು ಇಂತು ಕುಂತಿ ಮಕ್ಕಳಿಗೆ ರಾಜ್ಯ ಬಂತು." "ಕಸ್ತೂರಿಗಳೇ ! ನಿಮಗೆ ಇವರ ಪರಿಚಯ ಇಲ್ಲ ಅಂತ ಕಾಣುತ್ತೆ. ಇವರು ಅಮಲ್ದಾರರ ಅಳಿಯಂದಿರು. ಇವರೂ ಏನೇನೋ ಬರೆಯುತ್ತಿದಾರೆ !" ಓಹೊ ! ಸಂತೋಷ ! ಮಾವನವರಿಗೆ ಸೌಖ್ಯತಾನೆ ?" "ಸ್ವಾಮಿ ! ತಮ್ಮ ಹೆಸರು ಎಲ್ಲೋ ಕೇಳಿದ್ದೆ. ಪದಾರ್ಥ ನೋಡಿರಲಿಲ್ಲ. ತಮ್ಮಿಂದ ಒಂದು ಉಪಕಾರವಾಗಬೇಕಾಯಿತು. ತಮ್ಮ ಪುಸ್ತಕದ ಒಂದು ಪ್ರತಿ ನನಗೆ ವಿಶ್ವಾಸದಿಂದ, ನನಗೆ ಕೊಡುತ್ತೀರಾ, ಅಂತ, ತಮ್ಮನ್ನು ಕೇಳಬಹುದೇ, ಅಂತ ..." "ಬನ್ನಿ, ಇಲ್ಲಿ ! ಕಸ್ತೂರಿಗಳೇ ! ಏನಿದು ? ಕೋಪ ಮಾಡಿಕೊಳ್ಳಬೇಡಿ ...ಕಸ್ತೂರಿಗಳೇ ! ...ಸ್ವಾಮಿ ! ಹೊರಟುಬಿಟ್ಟರೇನು ?"

---

# ನಮ್ಮ ಮಾತು

---

ನಮ್ಮ ಗ್ರಂಥಮಾಲೆಯ ಎರಡನೆಯ ಕುಸುಮವಾಗಿ, ಸುಪ್ರಸಿದ್ಧ ಗ್ರಂಥಕರ್ತರೂ, ಮೈಸೂರು ವಿಶ್ವವಿದ್ಯಾನಿಲಯದ ಚರಿತ್ರೆಯ ಉಪನ್ಯಾಸಕರೂ ಆದ, ಶ್ರೀಮಾನ್ ಎನ್. ಕಸ್ತೂರಿಯವರ ಹಾಸ್ಯಪ್ರಬಂಧಗಳ ಸಂಗ್ರಹವಾದ "ಯದ್ವಾ–ತದ್ವಾ" ಎಂಬ ಗ್ರಂಥವನ್ನು ಹೊರಡಿಸಿದ್ದೇವೆ. ಉದಾರಹೃದಯರಾದ ಕನ್ನಡ ಪ್ರೇಮಿಗಳೆಲ್ಲರೂ ನಮ್ಮ ಗ್ರಂಥಮಾಲೆಗೆ ಚಂದಾದಾರರಾಗಿಯೂ, ಪೋಷಕರಾಗಿಯೂ ಪ್ರೋತ್ಸಾಹವೀಯಬೇಕೆಂದು ಬೇಡುತ್ತೇವೆ.

ನಮ್ಮ ಗ್ರಂಥಮಾಲೆಯಲ್ಲಿ ಅರಳಿಸಲು ಈ ಗ್ರಂಥವನ್ನು ಬರೆದುಕೊಟ್ಟು, ಪ್ರೋತ್ಸಾಹಿಸಿದುದಕ್ಕಾಗಿ ಶ್ರೀಮಾನ್ ಕಸ್ತೂರಿಯವರಿಗೆ ಚಿರಋಣಿಯಾಗಿದ್ದೇವೆ.

ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸೌರಾಷ್ಟ್ರ ಪ್ರೆಸ್ಸಿನವರಿಗೆ ನಾವು ತುಂಬಾ ಕೃತಜ್ಞರಾಗಿದ್ದೇವೆ.

ನಮ್ಮ ಗ್ರಂಥಮಾಲೆಗೆ ಐದು ರೂಪಾಯಿ ಚಂದಾ ಕೊಟ್ಟು ಪೋಷಕರಾಗಿ ಸಹಾಯಮಾಡಿದವರಿಗೆ ಚಿರಋಣಿಯಾಗಿದ್ದೇವೆ.

**ಸಂಚಾಲಕ.**

---

ಸರಸ್ವತಿ ಗ್ರಂಥಮಾಲಾ

ನೂರನೆಯ ಕುಸುಮ

# ಹಳ್ಳಿಯ ಪದಗಳು



ಸಂಗ್ರಾಹಕರು :

ಬಿ. ಎಸ್. ರಂಗಸ್ವಾಮಿ

# ಇದರಲ್ಲೇನೇನಿದೆ?

## ಸರಸ್ವತಿ ಗ್ರಂಥಮಾಲಾ

### ನಾಲ್ಕನೆಯ ಕುಸುಮ

# ಇಂಗ್ಲೀಷ್ ಪ್ರಬಂಧಗಳು

ಸುಪ್ರಸಿದ್ಧ ಇಂಗ್ಲೀಷ್ ಪ್ರಬಂಧಕಾರರ ಸಂಗ್ರಹ



ಅನುವಾದಕರು :

**ಎ. ನಾಗೇಶರಾವ್**

ಉಪನ್ಯಾಸಕರು, ಇಂಟರ್‌ಮೀಡಿಯಟ್ ಕಾಲೇಜು

ಮೈಸೂರು

# ಕಾವಲಿಯಿಂದ ಒಲೆಗೆ

---

ನನಗೆ ಸಾವಿರಸಲ ಸಂಕಟ ಬಂದದ್ದುಂಟು. ಆ ಹೊತ್ತಿನದೇನೂ ಹೊಸದಲ್ಲ. ಆದರೂ ಮೊನ್ನೆ ನವೆಂಬರಲ್ಲಿ ನಡೆದ ಸಂಗತಿಯನ್ನು ನೆನೆದರೆ ಈಗಲೂ ನಡುಗುತ್ತೇ ; ಮೈಕೈಯೆಲ್ಲಾ ಸೋತು ಕೂತುಬಿಡುತ್ತವೆ.

ಬೇರೆ ಏನೂ ಇಲ್ಲ ಸ್ವಾಮಿ ! ಕೇವಲ ಸಣ್ಣ ವಿಷಯ. ಬೆಳಗ್ಗೆ ಎದ್ದು ಎಂದಿನಂತೆ ದೋಸೆ ಆಸೆಯಿಂದ ಹೋಟಲಿಗೆ ಹೊರಟೆ....ಇನ್ನೇನು ಮುಗಿಯಿತು ದಾರಿ ಅನ್ನುವುದರೊಳಗೆ, ಬಂದುಬಿಟ್ಟ. ಸ್ವಾಮಿ, ಎದುರಿಗೆ ಶನೀಶ್ವರ ! ಯಾವ ಘಳಿಗೆಯಲ್ಲಿ ಹಾಸಿಗೆಯಿಂದೆದ್ದೆನೋ, ಯಾರ ಮುಖದರ್ಶನವಾಯಿತೋ ?....ಬಂದೇಬಿಟ್ಟ ! ಬರುತ್ತಲೇ ಇದಾನೆ, ಸರಸರಾ, ಅಂತ !

“ ಸೋಮವಾರದ ದಿನ ನಾನು ಕೊಟ್ಟ ರೂಪಾಯಿ ಎಂಟನ್ನೂ ಠಣ್, ಠಣ್, ಅಂತ ಎಣಿಸಿದರೆ, ಬದುಕಿದೆ ; ಇಲ್ಲದೆ ಹೋದರೆ, ಜೀವದ ಮೇಲಿನ ಹಂಬಲ ಬಿಟ್ಟುಬಿಡು, ಅಪರ ಕ್ರಿಯೆಗೆ ಅಪ್ಪಣೆ ಕೊಟ್ಟುಬಿಡು !” ಅಂತ ಹೇಳಿದ್ದ ಸ್ವಾಮಿ, ಆ ಹಿಡಿಂಬಾಸುರ. ಆ ದಿನ ಸೋಮವಾರ ಕಳೆದು, ಬುಧವಾರ ! ನನ್ನ ಗತಿ ಏನಾಗಬೇಕು ?....ಅಲ್ಲ, ಈ ಕೀಚಕ ಕುಸ್ತಿ ಟೂರ್ನಮೆಂಟಿಗೋಸ್ಕರ ಬೆಂಗಳೂರಿಗೆ ಹೋಗಿದಾನೆ, ಶನಿವಾರದತನಕ ದಾರಿಯಲ್ಲೆಲ್ಲೂ ಸಿಗುವುದಿಲ್ಲ ಅಂತ ಹೇಳಿದ್ದನಲ್ಲಾ, ಗುಂಡ....ಹಾಳು ಗುಂಡ !

ಸರಿ ! ಈಗ ಅವನ ಮಾತೇಕೆ ? ಯಾವುದಾದರೂ ಒಂದು ಕಡೆ ಜಾರಿಕೊಳ್ಳುವುದೇ ಮೇಲು....ಅಯ್ಯೋ ! ಈ ಊರಿನ ಮುನಿಸಿಪಲ್ ಮೆಂಬರುಗಳ ಬುದ್ಧಿ ಎಷ್ಟೆಂದು ಹೇಳಲಿ ! ದೇವರೇನೂ ಕಡಿಮೆ ಮಾಡಿಲ್ಲ. ತಮಗೂ ಮೈ ತುಂಬಾ ಸಾಲ ಇದೆ. ಆದರೆ ಸಾಲ ಕೊಟ್ಟ ಸಾಹುಕಾರ ಎದುರಿಗೆ ಬಂದರೆ, “ಮೆಂಕಟರಮಣಾ” ಅಂತ ನುಗ್ಗುವುದಕ್ಕೆ ಒಂದು ಸಂದು ಬೇಡವೆ ? ಅಲ್ಲಲ್ಲಿ ದಟ್ಟವಾಗಿ ಮರಬಳ್ಳಿ ಗಿಡಗೆಂಟೆ ಬೆಳೆಸಬಾರದೆ? ಎಂತಹ ಊರಪ್ಪಾ?

ಹಿರಿಯರ ಆಶೀರ್ವಾದ ಬಲದಿಂದ, ಸಮೀಪದಲ್ಲೇ ಒಂದು ಬಂಗಲಿಯ 'ಗೇಟು ಬಾಗಿಲು' ತೆರೆದಿತ್ತು. 'ಎಸ್. ರಾಮಯ್ಯ' ಅಂತ ಬರೆದಿದ್ದ ಒಂದು ತಗಡಿನ ತುಂಡು ಆ ಬಾಗಿಲಲ್ಲಿ ಸೊಟ್ಟಗೆ ಇಳಿಮುಖದಲ್ಲೇ ನೇತಾಡು ತ್ತಿತ್ತು. ನುಗ್ಗಿದೆ ಸ್ವಾಮಿ, ಒಳಕ್ಕೆ. ನನ್ನನ್ನು ಬೈದು ಬೊಗಳಿ ಹೊರಗೆ ಕಳುಹಿಸುವುದಕ್ಕೆ ನಾಯಿ, ಜವಾನ ಯಾರೂ ಇರಲಿಲ್ಲ. ನೆಟ್ಟಗೆ ಮನೆಯ ಹೊಸಲುತನಕ ಹೋಗಬೇಕಾಯಿತು, ರಸ್ತೆಯಿಂದ ಕಾಣಿಸದೆ ಇರುವುದಕ್ಕೆ. ಬೀದಿಯಲ್ಲಿ ಹೋಗುತ್ತಿರುವವರಾರಿಗೆ ನಾನುಗೋಚರಿಸುವುದಿಲ್ಲವೆಂದು ಹಿಗ್ಗಿದೆ.

ಅಷ್ಟರಲ್ಲಿ, ನನ್ನ ಕಾಲಿನ ಸಪ್ಪಳ ಕಿವಿಯಲ್ಲಿ ಬಿದ್ದು, ಒಳಗಿನಿಂದ ಬಾಗಿಲು ತೆರೆದು ಯಾರೋ ಒಬ್ಬಾತ,–ಮನೆ ಅಡಿಗೆಯವನಹಾಗೆ ತೋರಿತು– ಹೊರಗೆ ಬಂದ. "ಯಾರು ಸ್ವಾಮಿ?" ಅಂದ "ಬಂದ ಕೆಲಸ ವಾಗಿ ಯಿತು, ಹೋಗಿಬಿಟ್ಟು ಬರುತ್ತೇನೆ" ಅಂತ ಉತ್ತರ ಕೊಟ್ಟು, ಹೊರಟುಬಿಡ ಬಾರದಾಗಿತ್ತೆ, ನಾನು! ತೆಗೆದೆ ಒಂದು ವರಸೆ; ಒಂದು ಕುಯುಕ್ತಿ ಹುಡು ಕಿದೆ. ಸುಮ್ಮನೆ ಕೇಟಲೆಗೋಸ್ಕರ. "ಪೂರ್ಣಬೋಧಾಚಾರ್ರು ಇದಾರೆಯೇ?" ಅಂದೆ! "ಹೊರಗಡೆ ಇರುವ ಬೋರ್ಡು ನೋಡಿದರೆ ತಿಳಿಯುವುದಿಲ್ಲ ವೇನಯ್ಯಾ ಇದು ಯಾರ ಮನೆ ಅಂತ? ಹೋಗಾಚೆ!" ಅಂತ ಬೈದು, ನನ್ನನ್ನು ಮಾನವಾಗಿ ಕಳುಹಿಸಿಕೊಡುವ ಬದಲು, "ಇದಾರೆ, ಏನು ಬೇಕು?" ಅಂದ ಅವನು.

ಇದು ಒಳ್ಳೆಯ ಗ್ರಹಚಾರ! ಕಷ್ಟಕ್ಕಿಟ್ಟುಕೊಂಡಿತಲ್ಲಾ! ಅಂತ ಗೊಣಗುತ್ತಾ, "ಮೇಷ್ಟರು ಪೂರ್ಣಬೋಧಾಚಾರ್ರು?" ಅಂದೆ. "ಇದ್ದಾ ರಪ್ಪಾ! ಏನು ಬೇಕಾಗಿತ್ತು?" ಅಂತ ಅದಕ್ಕೂ ಅವನು ಉತ್ತರ ಕೊಡೋದೇ?

"ಮಳವಳ್ಳಿಯಲ್ಲಿದ್ದರಲ್ಲಾ ಮೂರು ವರ್ಷ, ಆ ಪೂರ್ಣಬೋಧಾ ಚಾರ್ರು, ಅವರನ್ನ ನಾನು ಕೇಳುವುದು!" "ಹೌದು, ಹೌದು, ನಾನೇ! ಕೊಂಚ ದಿವಸ ಅಲ್ಲೂ ನನ್ನನ್ನ ಹಾಕಿದ್ದರು."

"ಮೊನ್ನೆ ಮಗಳಿಗೆ ಮದುವೆ ಮಾಡಿದರಲ್ಲಾ...." "ಹೌದಪ್ಪಾ! ಹೌದು! ಏನಾಗಬೇಕು? ಹೇಳು ಬೇಗ, ಮಗುವಿಗೆ ಜ್ವರ, ಔಷಧಿ ಕೊಡಿಸಬೇಕು!"

ನಾನು ಏನು ಮಾಡಬೇಕು ಸ್ವಾಮಿ ಅಂತಹ ಸನ್ನಿವೇಶದಲ್ಲಿ ? ಹಾಕಿದೆ ಇನ್ನೊಂದು ಪ್ರಶ್ನೆ :

" ಹೋದ ವರ್ಷ, ಕೋ-ಆಪರೇಟಿವ್ ಸೊಸೈಟಿ ಹಣ ತಿಂದದ್ದಕ್ಕೆ.... ...." ಅಂತ ಮುಗಿಸುವುದರೊಳಗೆ, ಆತ "........ಮಗನೆ ! ನಿನಗೆ ಹ್ಯಾಗೋ ಅದು ಗೊತ್ತಾಯಿತು ? ಬಾಯಿ ಮುಚ್ಚಿಕೊಂಡು, ಬಂದ ದಾರಿ ಹಿಡಿಯುತ್ತೀಯೋ ಇಲ್ಲವೋ " ಅಂತ ಎರಡು ಮೂರು ಬಲವಾಗಿ ಬಾರಿಸಿಯೇ ಬಿಟ್ಟ ಸ್ವಾಮಿ !

ಈಗಲೂ ದಿಗಿಲಾಗುತ್ತೆ : ನೆನೆದುಕೊಂಡರೆ ಕೆನ್ನೆ, ಬೆನ್ನು ಇನ್ನೂ ನೋಯುತ್ತೆ.



# ಯಾರನ್ನು ಕೇಳಿದರೂ ಹೇಳುತ್ತಾರೆ

೧

"ಸ್ವಾಮಿ! ಶಿರಸ್ತೆದಾರ್ ವೆಂಕಟರಾಮಯ್ಯನವರ ಮನೆ ಯಾವುದು?" "ಏನು! ಶಿರಸ್ತೆ ವೆಂಕಟರಾಮಯ್ಯನ ಮನೆಯೇ? ಅದೇನು, ಅವರ ಮನೆಗೆ ತಾವು ಹೋಗುವುದು? ತಾವು ಯಾರು? ಗೊತ್ತಾಗಲಿಲ್ಲವಲ್ಲಾ!" "ನಾನು ಅವರ ಅಳಿಯನ ಚಿಕ್ಕಪ್ಪ! ನೋಡಬೇಕಾದ ಕೆಲಸವಿತ್ತು, ಅವರ ಮನೆ ತಮಗೆ ಗೊತ್ತಿದೆಯೇ?" "ಯಾವ ಅಳಿಯ? ಚೆನ್ನರಾಯಪಟ್ಟಣದ ಹುಡು ಗನೇ? ಮೊನ್ನೆ ಮೋಟಾರಿಗೆ ಸಿಕ್ಕಿ, ಆಸ್ಪತ್ರೆಯಲ್ಲಿ ಬಿದ್ದಿದ್ದಾನಲ್ಲಾ ಅವನೇ?" "ಅಲ್ಲ ಅಲ್ಲ, ನಮ್ಮದು ಚಿಕ್ಕಬಾಣಾವರ; ಅವರ ಮೂರನೆಯ ಮಗಳು ..." "ಓಹೋ! ತಿಳಿಯಿತು, ಲಕ್ಷ್ಮಿಯ ಗಂಡನ ಚಿಕ್ಕಪ್ಪನೇ? ತುಂಬಾ ಸಂತೋಷ ತಮ್ಮನ್ನು ಕಂಡದ್ದು." "ಲಕ್ಷ್ಮಿ ಅಂತಲ್ಲ ಅವಳ ಹೆಸರು,— ಸರಸು; ಅವರ ಮನೆ ಯಾವುದು? ಬೇಗ ಹೇಳೋಣವಾಗಲಿ; ನಾನು ಹನ್ನೊಂದು ಗಂಟೆಯ ರೈಲಿಗೆ ಊರಿಗೆ ಹಿಂತಿರುಗಬೇಕು." "ಸರಸು? ಸರಸು ಎಂಬ ಹೆಸರಿನ ಹುಡುಗಿಯೇ ಇಲ್ಲವಲ್ಲಾ ವೆಂಕಟರಾಮಯ್ಯನಿಗೆ?" "ಹೌದು, ಹೌದು; ನರಸು ಅಂತಿರಬೇಕು, ನನಗೆ ಚೆನ್ನಾಗಿ ಜ್ಞಾಪಕವಿಲ್ಲ. ಅವರ ಮನೆ........" "ಅದಿರಲಿ, ತಾವು ಇಷ್ಟು ಅವಸರಪಡುವುದೇತಕ್ಕೆ? ನಿಧಾನವಾಗಿ ನಾಲ್ಕು ದಿನ ಇದ್ದು ಹೋಗಿ. ವೆಂಕಟರಾಮಯ್ಯನೇನು, ಧರ್ಮ ರಾಯನ ಹಾಗಿದಾನೆ; ನಿಮಗೆ ಒಂದೆರಡು ದಿನ ಅನ್ನ ಹಾಕಲಾರನೆ?" "ಇಲ್ಲ, ಇಲ್ಲ ..." "ತಾವು ಇರುವುದು ಚಿಕ್ಕಬಾಣಾವರದಲ್ಲೋ, ಅಥವಾ...." "ಸದ್ಯಕ್ಕೆ ಬೆಂಗಳೂರಲ್ಲಿ." "ಯಾಕೆ? ಸದ್ಯಕ್ಕೆ, ಅಂತ ಹೇಳುತ್ತೀರಲ್ಲಾ, ಖಾಯಂ ಆಗಿಯೇ ಬೆಂಗಳೂರಿನಲ್ಲಿರಬಹುದಲ್ಲಾ! ಈಗಂತೂ ಬೆಂಗಳೂರಲ್ಲಿ ದೀಪ, ಬಸ್ಸು...." "ವೆಂಕಟರಾಮಯ್ಯನವರ ಮನೆ...." "ತಮಗೆ ಬೆಂಗ ಳೂರಲ್ಲಿ ಕೆಲಸ?" "ಇನ್ಷೂರೆನ್ಸ್ ಆಫೀಸಿನಲ್ಲಿ........ಅವರ ಮನೆ?" "ಸರ್ಕಾರಿಯೋ, ಕಂಪನಿಯೋ?" "ಕಂಪನೀನೆ. ನನಗೆ ಹೊತ್ತಾಯಿತು

ಸ್ವಾಮಿ !" "ತಾಳಿ ತಾಳಿ. ಅವಸರವೇನು ? ತಾವು ಇನ್ಷೂರೆನ್ಸಿನಲ್ಲಿದೀರಿ ! ಹಾಗಾದರೆ, ನಿಮ್ಮನ್ನೇ ಕೇಳಿಬಿಡುತ್ತೇನೆ... ಈಗ, ಒಬ್ಬ ಒಂದು ವರ್ಷದ ಪ್ರೀಮಿಯಂ ಕೊಟ್ಟುಬಿಟ್ಟು, ನೇಣು ಹಾಕಿಕೊಂಡುಬಿಟ್ಟಿದಾನೆ ಅನ್ನಿ, ಅವನ ಹಿರಿಯ ಮಗನಿಗೆ...."

೨

"ಸ್ವಾಮಿ ! ಶಿರಸ್ತೇದಾರ್ ವೆಂಕಟರಾಮಯ್ಯನವರ ಮನೆ ಯಾವುದು ?" "——" "ಸ್ವಾಮಿ ! ತಮ್ಮನ್ನೇ ! ಶಿರಸ್ತೇದಾರ್...." "——?——" "ಸಾರ್ ! ಕ್ಷಮಿಸಬೇಕು ... ನಾನು ಪರಸ್ಥಳ.... ಇಲ್ಲಿ, ಶಿರಸ್ತೇದಾರ್ ವೆಂಕಟ ರಾಮಯ್ಯನವರ ಮನೆ.... ..." "—!—!—" "ಸಾರ್ ! ಸ್ವಲ್ಪ ಹೇಳಿ ಸಾರ್ ! ಶಿರಸ್ತೇದಾರ್........" "ಯಾರನ್ನಯ್ಯಾ ನೀನು ಕೇಳೋದು ? ನಾನು ಯಾರೂ ಅಂತ ತಿಳಿದುಕೊಂಡೆ ?" "——!!——" "ಯಾರೂ ಅಂತ ತಿಳಿದುಕೊಂಡಿದೀಯಾ, ಅಂತೀನಿ ! ನಿನ್ನ ತಾತನ ಜವಾನನೇನೋ ನಾನು ? ನಿನ್ನ ಅಪ್ಪ ಸಂಬಳ ಕೊಟ್ಟು ಇಟ್ಟಿದಾನೆಯೋ ನನ್ನನ್ನ, ಊರಿನವರ ಮನೆಯನ್ನೆಲ್ಲಾ ಒಂದೊಂದಾಗಿ ನಿನಗೆ ತೋರಿಸುವುದಕ್ಕೆ........?"

೩

"ಸ್ವಾಮಿ ! ಶಿರಸ್ತೇದಾರ್ ವೆಂಕಟರಾಮಯ್ಯನವರ ಮನೆ ಯಾವುದು ?" "ಯಾರ ಮನೆ ?" "ವೆಂಕಟರಾಮಯ್ಯನವರ ಮನೆ" "ಯಾರಯ್ಯಾ, ಅವರು ? ವೆಂಕಟರಾಮಯ್ಯ ಅಂತ ಸಾವಿರ ಜನ ಇದಾರೆ ಈ ಊರಿನಲ್ಲಿ." "ಶಿರಸ್ತೇದಾರರು" "ಏನು ?" "ಶಿರಸ್ತೇದಾರ್" "ಏನಂದೆ ?" ಶಿರಸ್ತೆ ದಾರರು. "ಓಹೋ ! ಷೇಕ್‌ದಾರರೆ ?" "ಅಲ್ಲ, ಶಿರಸ್ತೇದಾರರು." "ಸರಿ ಯಾಗಿ ಹೇಳಯ್ಯ, 'ದಾರ್', 'ದಾರ್' ಅಂತ ಮಾತ್ರ ಬೊಗಳುತಿ ದೀಯಲ್ಲಾ, ಬಿಡಿಸಿ ಬಿಡಿಸಿ ಹೇಳಯ್ಯ" "ಹೇಳಿದೆನಲ್ಲ ಸ್ವಾಮಿ !" "ರೇಗ ಬೇಡ, ಸ್ಪಷ್ಟವಾಗಿ ಹೇಳುವುದಕ್ಕೆ ಬರದೆಯಿದ್ದರೆ, ನನ್ನ ಮೇಲೆ ಯಾಕಯ್ಯಾ ಎಗರಾಡುತ್ತೀಯಾ ?" "ಶಿ-ರ-ಸ್ತೆ-ದಾ-ರ-ರು" "ಈಗ ಅರ್ಥವಾಯಿತು, ಷೇಕ್ದಾರರು ತಾನೆ ?" "ಚಿಂತೆಯಿಲ್ಲ ಸ್ವಾಮಿ, ನಾನು ಮುಂದಕ್ಕೆ ಹೋರಡ್ತು ತ್ತೇನೆ, ನನಗೆ ಹೊತ್ತಾಯಿತು." "ಇಲ್ಲಿ ಬಾರಯ್ಯ ಇಲ್ಲಿ; ವಯಸ್ಸಾದವರ

ಹತ್ತಿರ ಕೋಪಿಸಿಕೊಳ್ಳಬಾರದಯ್ಯಾ ಹೀಗೆ. ನಾನು ಹೇಳುವ ಮಾತು ಕೇಳು. ಸುಮ್ಮನೆ ಯಾಕೆ ಅಲೆದಾಡುತ್ತೀಯಾ ಬಿಸಿಲಲ್ಲಿ. ವೆಂಕಟರಾಮಯ್ಯ ಅಂತ ಹೆಸರಿರುವವರು ಈ ಬೀದಿಯಲ್ಲೂ ಇಲ್ಲ, ಆಚೆ ಬೀದಿಯಲ್ಲೂ ಇಲ್ಲ, ಈ ಊರಿನಲ್ಲೇ ಇಲ್ಲ, ತೆಪ್ಪನೆ ಮನೆಗೆ ಹೋಗು !........"

೪

"ಸ್ವಾಮಿ ! ಶಿರಸ್ತೆದಾರ್ ವೆಂಕಟರಾಮಯ್ಯನವರ ಮನೆ ಯಾವುದು ?" "ವೆಂಕಟರಾಮೂನೇ ? ವೆಂಕಟರಾಮು ಮನೆಗೆ ಹೋಗಬೇಕೆ ?" 'ಹೂಂ' "ನಾನು ತೋರಿಸುತ್ತೇನೆ ಸ್ವಾಮಿ ! ಅಯ್ಯಯ್ಯೋ, ಅದಕ್ಕೇನು ? ಅಷ್ಟು ಸಹಾಯ ಮಾಡದೆ ಹೋದರೆ, ನಾವು ಮನುಷ್ಯರಾಗಿ ಹುಟ್ಟಿ ಏನು ಸ್ವಾಮಿ ಪ್ರಯೋಜನ ? ನಾನೂ ಅದೇ ದಾರಿಯಲ್ಲೇ ಹೋಗುತ್ತಾ ಇದೇನೆ, ಏನೂ ತೊಂದರೆ ಇಲ್ಲ, ಬನ್ನಿ ಹೋಗೋಣ." "ತಾವು ಸಿಕ್ಕಿದ್ದು ನನ್ನ ಭಾಗ್ಯ." "ಹಾಗೆನ್ನಬೇಡಿ ದೇವರು, ಇದೆಲ್ಲಾ ದೈವ ಸಂಕಲ್ಪ ; ಇಲ್ಲದಿದ್ದರೆ, ಇಷ್ಟು ಜನರು ಬೀದಿಯಲ್ಲಿ ಓಡಾಡುತ್ತಿರುವಾಗ ತಾವು ನನ್ನನ್ನೇ ಕೇಳಬೇಕೆ, ವೆಂಕಟರಾಮು ಮನೆ ಎಲ್ಲಿ ಅಂತ ?" "ತಮ್ಮ ಮುಖ ನೋಡಿದಾಗ, ಉಪಕಾರಿ ಅಂತ ತೋರಿತು, ಅದಕ್ಕೆ...." "ಛೆ, ಛೆ, ಹಾಗೆ ಹೇಳಬೇಡಿ. ಇದೇನು ಮಹಾ ಉಪಕಾರ ? ಅವನ ಮನೆ ನನ್ನ ಬೀದಿಯಲ್ಲೇ ಇದೆ....ಕೊಂಚ ತಾಳಿ, ಎದುರಂಗಡಿಗೆ ಹೋಗಿ ಮೂರು ಕಾಸಿಗೆ ನಶ್ಯ ತೆಗೆದುಕೊಂಡು ಬಂದುಬಿಡುತ್ತೇನೆ. ಓ ! ನನ್ನ ಭಾವಮೈದನ ತಮ್ಮ, ಶಾಮಣ್ಣ ಬರುತ್ತಾ ಇದಾನೆ.... ಶಾಮೂ! ಶಾಮೂ! ಅವನನ್ನು ನೋಡಿ ಆರು ತಿಂಗಳಾಯಿತು, ಎರಡು ನಿಮಿಷ ಮಾತನಾಡಿಸಿಬಿಟ್ಟು ಬಂದುಬಿಡುತ್ತೇನೆ, ಬೇಜಾರುಪಟ್ಟುಕೊಳ್ಳಬೇಡಿ........ ತುಂಬಾ ಹೊತ್ತಾಯಿತೋ ಏನೋ ? ಯಾವಯಾವುದೋ ಮನೆ ತಿಪ್ರಗಳನ್ನೆಲ್ಲಾ ಎತ್ತಿಬಿಟ್ಟ, ಶಾಮು....ಇನ್ನೇನು ?....ವೆಂಕಟರಾಮು ಮನೆ ಬಂತು ಅಂತ ಇಟ್ಟುಕೊಳ್ಳಿ, ಅರ್ಧ ಮೈಲಿ ಕೂಡ ಇಲ್ಲ....ಹತ್ತಿರವೇ....ಸ್ವಲ್ಪ ಆಚೆ ಬೀದಿ ಹೊಕ್ಕು ಹೋಗೋಣ....ಲಾಯರಾಫೀಸಿನಲ್ಲಿ ಒಂದು ಹತ್ತು ನಿಮಿಷದ ಕೆಲಸ ಇದೆ, ಬನ್ನಿ....ಬೇಗ ಬೇಗ ಕಾಲು ಹಾಕಿ....ಹಾಗೆಯೇ, ಈ ಕೋ-ಆಪರೇಟಿವ್ ಸೊಸೈಟಿಗೆ ಹೋಗಿ ಈ ತಿಂಗಳ ಕಂತು ಕಟ್ಟಿಬಿಟ್ಟು ಓಡಿ ಬಂದು ಬಿಡುತ್ತೇನೆ....ಬಿಸಿಲು....ಈ ಮರದ ನೆರಳಲ್ಲೇ ನಿಂತಿರಿ....ವೆಂಕಟರಾಮು

ಮನೆ ಬಾಗಿಲಲ್ಲೇ ಕರೆದುಕೊಂಡುಹೋಗಿ ಬಿಡುತ್ತೇನೆ, ಧೈರ್ಯವಾಗಿರಿ.... ಹಾಳಾದವನು ಆ ಸೊಸೈಟಿ ಗುಮಾಸ್ತೆ ಕೊಂಚ ತಡ ಮಾಡಿಬಿಟ್ಟ, ಚಿಂತೆಯಿಲ್ಲ, ಬೇಗ ಬೇಗ ಬನ್ನಿ....ಓ! ನನ್ನ ಮರವೆಗೆ ಬೆಂಕಿ ಹಾಕಬೇಕು, ನನ್ನ ಕೊಡೆಯನ್ನು ಸೊಸೈಟಿಯಲ್ಲೇ ಮರೆತುಬಿಟ್ಟೆ....ಇಲ್ಲೇ ಇರಿ ...ಒಂದು ಕ್ಷಣ ದಲ್ಲಿ ತಂದುಬಿಡುತ್ತೇನೆ .......ತಮಗೆ ಹೊತ್ತಾಯಿತೋ ಏನೋ, ಲಾಯರಾಫೀಸಲ್ಲೇ ಇತ್ತು ಹಾಳು ಕೊಡೆ ...ಅಂದರೆ, ಈ ಕೊಡೆ....ಇದು ನನ್ನದಲ್ಲ.... ಯಾರದೋ ?....ಅಂತೂ ಪದಾರ್ಥಕ್ಕೆ ಪದಾರ್ಥ ಬಂದಹಾಗಾಯಿತಲ್ಲಾ, ಇನ್ನೇನು ಬಿಡಿ, ನನ್ನದಕ್ಕಿಂತ ಚೆನ್ನಾಗಿಯೇ ಇದೆ........ಇಕೊ, ಭೀಮು ಬಂದ....ಭೀಮೂ, ಭೀಮೂ! ಅವನು ನನ್ನ ಮೊದಲನೆಯ ಸಂಸಾರದ ತಮ್ಮ...ನಾಲ್ಕು ಮಾತು ಆಡದೆ ನೆಟ್ಟಗೆ ಹೊರಟುಬಿಟ್ಟರೆ, ಅಪಾರ್ಥ ಮಾಡಿಕೊಂಡುಬಿಡುತ್ತಾನೆ. ..ನಾಲ್ಕೇನಾಲ್ಕು ಮಾತು ಆಡಿಬಿಡುತ್ತೇನೆ....ಕೊಂಚ ವಿಶ್ರಮಿಸಿಕೊಳ್ಳಿ....ಈ ಕೊಡೆ ಹಿಡಿದುಕೊಳ್ಳಿ....ತಮಗೇನು ಹೊತ್ತಾಗಿತ್ತಾಗಿಲ್ಲ ...ವೆಂಕಟರಾಮು ಕೂಡ ಹೆಲ್ತಾಫೀಸಿಂದ ಹಿಂತಿರುಗಬೇಕಲ್ಲ, ಅವನು ಮನೆಗೆ ಬರಬೇಕಾದರೆ, ಇನ್ನೂ ಅರ್ಧ ಮುಕ್ಕಾಲು ಗಂಟೆ ಆಗಬೇಕು...."

"ಹೆಲ್ತಾಫೀಸು ? ಯಾವ ಹೆಲ್ತಾಫೀಸು ? ನಾನು ಹೋಗುತ್ತಾ ಇರುವುದು ಶಿರಸ್ತೆದಾರರು ವೆಂಕಟರಾಮಯ್ಯನವರ ಮನೆಗೆ !" "ಶಿರಸ್ತೆ ವೆಂಕಟರಾಮಯ್ಯನೇ ! ಅಯ್ಯೋ ! ಮೊದಲೇ ಹೇಳಬಾರದಾಗಿತ್ತೇ ? ಶಿರಸ್ತೆದಾರರೇ ? ಅವರು ಯಾರೋ ಅಪ್ಪ, ನನಗೆ ತಿಳಿಯದು, ಹೋಗಿ ಆಚೆ ಬೀದಿಯಲ್ಲಿ ವಿಚಾರಿಸಿ, ಯಾರನ್ನು ಕೇಳಿದರೂ ಹೇಳುತ್ತಾರೆ, ಅದಕ್ಕೇನು ?



# ಸಾಹಿತ್ಯೋಪಾಸಕರಿಗೆ ಕೆಲವು ಸಲಹೆಗಳು

---

## ೧. ಕವನಗಳ ರಚನೆ

ಕವನಗಳನ್ನು ರಚಿಸಿ, ಸ್ವತಃ ನಾಲ್ಕಾರು ಕಡೆಗಳಲ್ಲಿ ಓದಿ, ತಾನೂ ಆನಂದಿಸಿ, ಇತರರ ಸಾಹಿತ್ಯ ಪ್ರೇಮವನ್ನು ನಂದಿಸುವುದು ಈಗ ವಾಡಿಕೆಯಾಗಿದೆ. ಆದ್ದರಿಂದ, ಕವನಗಳನ್ನು ಮಾಡಬೇಕೆಂಬ ಆಸೆ ಇರುವವರು ಕೆಳಗಿನ ಐದು ನಿಯಮಗಳನ್ನು ತಿಳಿದು, ದಿನವೂ ಅಭ್ಯಾಸ ಮಾಡುತ್ತಾ ಬಂದರೆ, ಬರಿಯ ಕಾಗದದ ಮೇಲೂ ಕೂಡ, ಕೊಠಡಿಯ ಗೋಡೆಗಳ ಮೇಲೂ ಕೂಡ, ಏಕೆ, ರೈಲುಗಾಡಿಯ ಬೆಂಚುಗಳ ಮೇಲೂ ಕೂಡ ಕಾವ್ಯಗಳನ್ನು ಬರೆಯುವಷ್ಟು ಪ್ರತಿಭೆಯು ಮೂಡುತ್ತದೆ.

(೧) ಹೇಳಿದುದನ್ನೇ ಮತ್ತೆ ಮತ್ತೆ ಹೇಳಬೇಕು.

ಉದಾಹರಣೆಗಳು—

(ಅ) ಸುತ್ತೀ, ಸುತ್ತೀ, ಸುತ್ತೀ, ಸುತ್ತೀ,
(ಆ) ಹೊಡೆದೂ ಬಡಿದೂ, ಹೊಡೆದೂ ಬಡಿದೂ,
ಬಡಿದೂ ಹೊಡೆದೂ, ಬಡಬಡ ಹೊಡೆದೂ........

(೨) ಇದ್ದುದನ್ನು ಇದ್ದಹಾಗೆ ಹೇಳುವುದು. ಅನೇಕರು ಸಾಧಾರಣವಾಗಿ ಹೀಗೆ ಹೇಳದೆ ಇರುವುದರಿಂದ, ಇದ್ದುದನ್ನು ಇದ್ದಹಾಗೆ ಹೇಳಿದರೆ, ಚಮತ್ಕಾರವಾಗಿರುವುದು.

ಉದಾಹರಣೆಗಳು—

(ಅ) ತೊರೆಗಳಲಿ ನೀರುಂಟು
ಕೆರೆಗಳಲಿ ಮೀನುಂಟು—
ಕವನದಲಿ ಏನುಂಟು ?
(ಆ) ಕವಿಯಲ್ಲ, ಕವಿಯಲ್ಲ,
ಕವಿಯಲ್ಲ, ನಾನು !

(೩) ಇಷ್ಟಕ್ಕಿದ್ದ ಹಾಗೆ, ಸಂಬಂಧವಿಲ್ಲದ ಎರಡು ಸಂಗತಿಗಳನ್ನು ಜೋಡಿಸಿ ಹೇಳಿ ವಾಚಕರನ್ನು ಬೆಚ್ಚಿಬೀಳಿಸುವುದು.

ಉದಾಹರಣೆಗಳು—

(ಅ) ಮೂಗು ತೇಗಿತು, ಕಣ್ಣು ಕೂಗಿತು,
ಕಿವಿಯು ತಾಗಿತು, ಸಾಗಿತು.

(ಆ) ನಡುಹಗಲ ತಂಪಿನಲಿ,
ಸುಡುಮರಳ ಕಂಪಿನಲಿ,
ಭೂಕಂಪಗಳು ಮಲಗಿ,

ಇತ್ಯಾದಿ.

(೪) ಸಾಧಾರಣವಾಗಿ ಜನರು ತೆಗಳುತ್ತಿರುವ ವಸ್ತುಗಳನ್ನು ಹೊಗಳುವುದೂ ಕವನಗಳ ರಚನೆಗೆ ಒಂದು ಒಳ್ಳೆಯ ಉಪಾಯ.

ಉದಾಹರಣೆಗಳು—

(೧) ಕಾಗೇ ! ಕಾಗೇ !
ಕೂಗೇ ! ಗೂಗೇ !

(೨) ಗಾಳಿ ಮಳೆ ಸುರಿಯಲಿ
ಬಂದುದೆಲ್ಲವು ಬರಲಿ—
ನೀನೆ ಸತ್ಯಾಗ್ರಹೀ
ಓ, ಎಮ್ಮೆ, ತಾಯೆ !

(೫) ಮೇಲೆ ಹೇಳಿದ ನಾಲ್ಕು ಉಪಾಯಗಳೂ ಫಲಿಸದ ಪಕ್ಷದಲ್ಲಿ, ಕವಿತೆಯ ಹುಚ್ಚು ಹಿಡಿದು ನರಳುತ್ತಿರುವ ಮಾನವನು ಕಡೆಯದಾಗಿ ಬೇರೊಂದು ದಾರಿಯನ್ನು ಹುಡುಕಬಹುದು. ಇತರರ ಕವನಗಳಿಂದ ಚೂರುಪಾರು ಹರಿದು ತಂದು ಕಾಲಕ್ರಮದಲ್ಲಿ ಒಂದು ಹೊಸ ಕವನವನ್ನು ಹೊಲೆದು ಬಿಡಬಹುದು.

ಉದಾಹರಣೆಗಳು—

ಸೇಗಿಲಯೋಗೀ !
ರಸಋಷಿಯೋಗೀ !

ಮೂವತ್ತು ಮೂರು ಕೋಟೀ,—ನಾ ಬರೆದ
ಕವನಗಳು, ಕಸದ ರಾಶೀ !

ಏಳಿರಿ ಬಂಟರೆ, ಏಳಿರಿ ನೆಂಟರೆ !
ಉದರವೈರಾಗ್ಯವಿದು !

ಮಲ್ಲಮ್ಮಾ, ತಿಮ್ಮಪ್ಪಾ !
ಸುಮ್ಮನೆ ಕೆಮ್ಮಿದ ತಿಮ್ಮಪ್ಪಾ !

ಏನು ಸುಖಾ ಅ ಇದು,
ಏನು ಸುಖಾ ಅ ಅ ಅ ಅ ?



# " ಮೋಟಾರು ಹಾರ್ನ "

---

ನಮ್ಮ ಮನೆ ಹುಡುಗರ ಬುದ್ಧಿ ಇನ್ನು ಯಾವುದರಲ್ಲಿ ಕಡಿಮೆ ಇದ್ದರೂ, ಬೀದಿಯಲ್ಲಿ ತಿರುಗಾಡುವ ಪ್ರತಿಯೊಂದು ಮೋಟಾರನ್ನೂ ಗುರುತು ಹಿಡಿದು, ಅದರ ನಾಮಧೇಯ, ಕುಲ, ಗೋತ್ರ, ನಂಬರು, ಯಾರಿಂದ ಯಾರು ಯಾವಾಗ ಕೊಂಡುಕೊಂಡರು, ಎಂಬ ಕಂತೆಪುರಾಣಗಳನ್ನೆಲ್ಲಾ ಚೆನ್ನಾಗಿ ಮನವರಿಕೆ ಮಾಡಿಕೊಳ್ಳುವುದರಲ್ಲಿ ತುಂಬಾ ನಿಷ್ಣಾತರಾಗಿದ್ದಾರೆ. ಅವಸರ ಬಂದಾಗ ಎರಡೋ ಮೂರೋ ರೂಪಾಯಿ ಕೊಟ್ಟು ಟ್ಯಾಕ್ಸಿ ಮಾಡುವ ಯೋಗ್ಯತೆ ಕೂಡ ಇಲ್ಲದ ನಮ್ಮ ಬಡಸಂಸಾರಕ್ಕೆ ಈ ತೈಲಶಕಟ ಶಾಸ್ತ್ರ ವ್ಯಾಸಂಗ ಬೇಕಿಲ್ಲವೆಂದು ನಾನು ಎಷ್ಟು ಗದರಿಸಿದರೂ,—ಅದು ಎಂತಹ ಪೂರ್ವ ಜನ್ಮ ಸಂಸ್ಕಾರ ವಿಶೇಷವೋ, ಅಥವಾ, ಮುಂದೆ ಬರಲಿರುವ ಲಕ್ಷ್ಮೀ ಕಟಾಕ್ಷದ ಮುಂಬೆಳಕೋ, ಗೊತ್ತಿಲ್ಲ—ಹುಡುಗರು ತಮ್ಮ ದುರಭ್ಯಾಸವನ್ನು ಬಿಡುವುದೇ ಇಲ್ಲ. "ಓ! ತಿಮ್ಮಪ್ಪಯ್ಯನ ಕಾರು; ಎಂ.ವೈ.ಎಸ್. ೨೩೪" "ಅಗೋ! ರಾಮರಾಯರು ಹೊಸದಾಗಿ ಹಾರ್ನ ಕೊಂಡುಕೊಂಡಿದ್ದಾರೆ".... "ಇಲ್ಲ, ಇಲ್ಲ, ಹಳೆಯದನ್ನು ರಿಪೇರಿ ಮಾಡಿದಾರೆ, ಅಷ್ಟೆ!" "ಸೋಮಣ್ಣನ ಕಾರು" "ನೋಡೋ! ರಾಮಣ್ಣನ ಲಾರಿ" ಹೀಗೆ ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಾರೆ.

ನಮ್ಮ ಮನೆ ಹುಡುಗರಿಗೆ ಮೋಟಾರುಗಳ ವಿಮರ್ಶೆಗೆ ಮೂಲ ಸೂತ್ರವಾಗಿರುವುದು, ಅದರ ಹಾರ್ನ! ಹಾರನ್ನುಗಳಲ್ಲಿ ತಾಮಸ, ರಾಜಸ, ಸಾತ್ವಿಕ, ಎಂಬ ಮೂರು ವಿಧಗಳುಂಟು. ಕೆಲವು ರಾಕ್ಷಸೀ ಸಂಪತ್ತಿನಿಂದ ಕೂಡಿವೆ; ಕೆಲವು ಹೆದರಿದ ಅಪ್ಸರಸ್ತ್ರೀಯರಂತೆ ಗದ್ಗದ ನಿನಾದವನ್ನುಂಟುಮಾಡುತ್ತವೆ; ಕೆಲವು ತಾಪಸಿಗಳಂತೆ ಗಂಭೀರವಾಗಿ, ಹೂಂಕರಿಸುತ್ತವೆ. ಈ ವ್ಯತ್ಯಾಸಗಳೆಲ್ಲವೂ ಅವುಗಳನ್ನು ತಯಾರಿಸುವಾಗಲೇ ಆಗಿಹೋಗಿಬಿಡುತ್ತವೆ. ಆದ್ದರಿಂದ, ಮೋಟಾರು ವಾಹನವನ್ನು ಕೊಂಡುಕೊಳ್ಳುವವರು ಅದಕ್ಕೆ ಯಾವ ತರಹದ ಹಾರನ್ನನ್ನು ಒದಗಿಸಿರುತ್ತಾರೆಂದು ಪರೀಕ್ಷಿಸಿದರೆ, ನಾವು ಅವರ

ಗುಣಗಣಗಳನ್ನು ಸೂಕ್ಷ್ಮವಾಗಿ ಹೇಳಿಬಿಡಬಹುದಾಗಿದೆ ತಲೆಹರಟೆ, ತೂಕದ ಆಸಾಮಿ, ಜಿಪುಣ, ದುರಹಂಕಾರಿ ಎಂದು ನಾವು ಅವರನ್ನು ಗುರುತಿಸಿ ಬೇರಿರಿಸಬಹುದಾಗಿದೆ.

ಅಲ್ಲದೆ, ಇಬ್ಬರು ಕಾರೊಡೆಯರು ಒಂದೇ ವಿಧವಾದ ಹಾರನ್ನನ್ನು ಒಂದೇ ಅಂಗಡಿಯಿಂದ ತಂದರೂ ಕೂಡ, ಕಾಲಕ್ರಮದಲ್ಲಿ ಅವರ ವ್ಯಕ್ತಿ ವಿಶೇಷವು ಅವುಗಳಿಗೂ ತಗುಲಿ, ಧ್ವನಿಯಲ್ಲಿ ವೈಶಿಷ್ಟ್ಯಗಳು ಕಂಡುಬರುತ್ತವೆ. ಅವರು ಗಾಳಿ ಚೀಲಗಳನ್ನು ಒತ್ತುವ ದೈನ್ಯ, ರಭಸ, ಆರ್ಭಟ, ನಯ, ಇವುಗಳಿಂದ ಶಬ್ದದಲ್ಲೂ ವ್ಯತ್ಯಾಸಗಳು ಉಂಟಾಗುತ್ತವೆ. ಹಾರನ್ನನ್ನು ಉಪಯೋಗಿಸುವ ವಿಧಾನದಿಂದ ಆಸಾಮಿಯ ಸಭ್ಯತೆ, ಮಟ್ಟ, ಆರೋಗ್ಯ ಸಂಸಾರಸುಖ, ಸಾಲ, ಶೀಲ, ಮುಂತಾದವುಗಳನ್ನು ಗೊತ್ತುಹಿಡಿಯಬಹುದು. ಕಾರಿನ ಬೆಲೆಯನ್ನು ಇನ್ನೂ ಕೊಟ್ಟು ತೀರಿಸಿಲ್ಲ ಅಥವಾ ಈಗತಾನೇ ಕೊಟ್ಟು ಋಣವಿಮುಕ್ತನಾಗಿದ್ದಾನೆ, ಕಾರೊಡೆಯನು ಆಫೀಸಿಗೆ ಹೋಗುತ್ತಿದ್ದಾನೆ, ಆಸ್ಪತ್ರೆಗೆ ಹೊರಟಿದಾನೆ, ಅವನಿಗೆ ಸಸ್ಪೆಂಡಾಗಿದೆ, ಪ್ರಮೋಷನ್ ಆಗಿದೆ, ಅವನ ಜೀವವಿಮೆ ಹಣ ಈ ಬೆಳಗ್ಗೆ ಬಂತು, ಅವನ ಮಗುವಿಗೆ ಜ್ವರ— ಎಂಬಿವೇ ಮೊದಲಾದ ಗುಟ್ಟಿನ ಸಮಾಚಾರಗಳನ್ನೂ ಕೂಡ ನಮ್ಮ ಮನೆ ಸುಬ್ಬು ಹಾರನ್ನಿನ ಶಬ್ದದಿಂದಲೇ ಪತ್ತೆ ಹಿಡಿಯುತ್ತಾನೆ—ಅವನ ಕಿವಿಯ ಚುರುಕನ್ನು ಎಷ್ಟು ಹೊಗಳಿದರೂ ಸಾಲದು !

ಕಳೆದ ವರ್ಷ ಸುಬ್ಬುವಿನ ಕಿವಿ ಎಡವಿ ತಪ್ಪು ಮಾಡಿದ್ದು ಒಂದೇ ಒಂದು ಸಲ. ಅದನ್ನೂ ಕೂಡ ಪ್ರಾಜ್ಞರಾದವರು ಅಷ್ಟು ತಪ್ಪು ಎಂದು ಹೇಳಲಾರರು. ತಪ್ಪು ಅಂದರೆ ತಪ್ಪಲ್ಲ; ಕೊಂಚ ಬೆಪ್ಪು ಅಷ್ಟೆ. ಇರಲಿ. ಹಾರನ್ನನ್ನು ಕೇಳಿ ಕಾರೊಡೆಯನಿಗೆ ಕಡಿಮೆ ಸಂಬಳದಲ್ಲಿ ಇನ್ನೆಲ್ಲೋ ಒಂದು ಕಡೆಗೆ ವರ್ಗವಾಗಿರಬೇಕು ಅಂತ ಅವನು ವಾದಿಸಿದ. ನಾನು ಸಾಯಂಕಾಲ ಕ್ಲಬ್ಬಿನಲ್ಲಿ ವಿಚಾರಿಸಿದಾಗ, ಶಿಕ್ಷೆ ಆದದ್ದು ಅವರಿಗಲ್ಲ, ಅವರ ಮಗನಿಗೆ; ಪರೀಕ್ಷೆಯಲ್ಲಿ "ಕಾಪಿ" ಮಾಡಿದ್ದಕ್ಕೆ ಅವನನ್ನ ಹೆಡ್ಮಾಸ್ಟರು ಕೆಳಗಿನ ತರಗತಿಗೆ ವರ್ಗಾಯಿಸಿ ೩ ರೂಪಾಯಿ ಜುಲ್ಮಾನೆ ಹಾಕಿದರು ಎಂಬ ವಿಷಯ ಪತ್ತೆ ಆಯಿತು !

ಡ್ರೈವರನು ಕಾರನ್ನು ನಡೆಸುತ್ತಿರುವಾಗಲೂ, ಬರಿಯ ಹಾರ್ನ ಒಂದರ ಶಬ್ದ ವಿಶೇಷದಿಂದಲೇ ಸುಬ್ಬು ಅನೇಕ ವಿಷಯಗಳನ್ನು ಸಂಗ್ರಹ ಮಾಡಿಬಿಡುತ್ತಾನೆ. ಎಷ್ಟು ತಿಂಗಳ ಸಂಬಳ ಅವನಿಗೆ ಇನ್ನೂ ಬಾಕಿ ನಿಂತಿದೆ ? ಯಜಮಾನನ ದೂರದ ನೆಂಟರು ಯಾರಾದರೂ, ಬಡವರಾದವರು, ಕಾರಿನಲ್ಲಿ ಕುಳಿತಿದಾರೆಯೇ ? ಯಜಮಾನನ ಮಟ್ಟಕ್ಕಿಂತ ಕಡಮೆ ದರ್ಜೆಯ ಅಧಿಕಾರಿಗಳ ಕಾರು ಮುಂದೆ ಹೋಗುತ್ತಿದೆಯೇ ? ಆ ಕಾರಿಗಿಂತ ಹಳೆಯದಾದ, ಅಥವಾ, ಅಗ್ಗವಾದ, ಕಾರು ಮುಂದೆ ಹೋಗುತ್ತಿದೆಯೇ ? ತಾನು ಹಿಂದೆ ಡ್ರೈವರಾಗಿದ್ದು, ಬಿಟ್ಟುಬಂದ ಕಾರನ್ನು ಇನ್ನೊಬ್ಬನು ಈಗ ಮುಂದೆ ಬಿಡಲು ಯತ್ನಿಸುತ್ತಿದಾನೆಯೇ ? ಇತ್ಯಾದಿ ಅತಿ ಸೂಕ್ಷ್ಮವಾದ ಸನ್ನಿವೇಶಗಳನ್ನೂ ಕೂಡ ಹಾರ್ನ ಮಾಡುವ ರೀತಿ, ವಿಧಾನ, ನಿಧಾನ, ಕರಕರ, ಕನಿಕರ ಇವುಗಳನ್ನು ಅರಿತುಕೊಳ್ಳುವಷ್ಟು ಪರಿಪಕ್ವವಾದ ನರಗಳಿದ್ದರೆ, ನಾವು ಗೊತ್ತು ಮಾಡಿಬಿಡಬಹುದು. ಮುಖ್ಯ ಕಿವಿ ಬೇಕು ; ಕಿವಿಗಳ ನಡುವೆ ಸುಬ್ಬುವಿನ ಮೆದುಳೂ ಇರಬೇಕು, ಅಷ್ಟೇ.

ಬಾಡಿಗೆ ಕಾರುಗಳಿಗೂ, ಬಸ್ಸುಗಳಿಗೂ ಹಾರ್ನ ಎಂಬುದೇ ಜೀವಾಳ ಎಂದು ಸುಬ್ಬು ನನಗೆ ಒಂದು ದಿನ ಉಪನ್ಯಾಸ ಮಾಡಿದ. ಬ್ರೇಕು, ಇಂಜಿನು, ಗಿಯರು, ಟಯರು, ಯಾವುದರಲ್ಲಿ ಏನು ಕೊರತೆಯಿದ್ದರೂ ಹೊಸದೊಂದು ಹಾರ್ನ ಇರುವ ತನಕ ಏನೂ ಭಯಪಡಬೇಕಾಗಿಲ್ಲವಂತೆ. ಆಗುಂಬೆ; ಅರಬೀ ಸಮುದ್ರ; ಅಸ್ತಮಿಸುವ ಸೂರ್ಯ ; ಆಕಾಶದಿಂದ ಅನಾಮತ್ತಾಗಿ ಪಾತಾಳಕ್ಕೆ ಧುಮುಕುವ ಡೊಂಕು ದಾರಿ ; ಬ್ರೇಕು ಸುತರಾಂ ಬಿಗಿ ಇಲ್ಲ ; ಆದರೇನು ? ದಿಗಂತದವರೆಗೂ ಮೊಳಗುವಂತೆ ಒಂದೇ ಸಮನೆ ಹಾರನ್ನನ್ನು ಒತ್ತುತ್ತಾ ಕೆಳಕ್ಕಿಳಿಯುತ್ತಿದ್ದರೆ, ಯಾವ ಪಾಪಿ, ಪರದೇಶಿ ತಾನೆ ರಸ್ತೆಗೆ ಅಡ್ಡ ಬಂದಾನು ?........ಬಸ್ಸು ಭರ್ತಿಯಾಗಬೇಕಾದರೆ, ನಾಲ್ಕು ಸಲ ಹಾರನ್ನನ್ನು ಅದುಮಿದರಾಯಿತು. ಎತ್ತಲಿಂದಲೋ ಪ್ರಯಾಣಿಕರುಗಳು ಪ್ರತ್ಯಕ್ಷವಾಗುತ್ತಾರೆ. ಸುಂಕದ ಕಟ್ಟೆಯವರು, ಪೋಲೀಸಿನವರು, ಪೆಟ್ರೋಲ್ ಮಾರುವವರು, ಎಲ್ಲರನ್ನೂ ಎಚ್ಚರಿಸಲು, ಸೋಮಾರಿತನದ ಸ್ಥಾನದಲ್ಲಿ ಚಟುವಟಿಕೆಯನ್ನು ಅವರ ಮೈಗೆ ತುಂಬಲು ಹಾರನ್ನಿನಂತಹ ಸಾಮಗ್ರಿ ಇಲ್ಲವೇ ಇಲ್ಲ. ದಾರಿಯ ನಡುವೆ ಕುಳಿತು ಚಿಕಿತ್ಸೆ ಹೊಂದುತ್ತಿರುವ ಬಸ್ಸಿಗೆ ಹಾರನ್ನಿನಷ್ಟು

ಮಾದಕವಾದ ಪದಾರ್ಥ ಬೇರೊಂದಿಲ್ಲ. ಬಂದ ಕಂಟಕವನ್ನು ಪರಿಹರಿಸಿ, ಮುಂದೆ ಸಾಗಿದ್ದಕ್ಕೆ ಬಸ್ಸಿನ ಅಂತರಂಗದಲ್ಲಿ ಉಕ್ಕಿಬರುವ ಆನಂದವೆಲ್ಲವನ್ನೂ ಅದರ ಹಾರನ್ನೇ ಹೊರಸೂಸುತ್ತದೆ. ಅಂತಹುದೊಂದು ಬಸ್ಸು ಬರುತ್ತಿದ್ದರೆ ಖಂಡಿತವಾಗಿಯೂ ಸುಬ್ಬು "ಅಣ್ಣಾ! ಕೇಳಲ್ಲಿ! ಚನ್ನರಾಯಪಟ್ಟಣದ ಬಸ್ಸು! ದಾರಿಯಲ್ಲಿ ಬ್ರೇಕ್ ಡೌನ್ ಆಗಿರಬೇಕು, ಹಾರ್ನ ಹೇಗಿದೆ, ನೋಡು!" ಅಂತ ಹೇಳಿಬಿಡುವನು, ಸಂದೇಹಪಡಬೇಡಿ. ಪ್ರಚಂಡ ಬುದ್ಧಿ, ಹುಡುಗನದು.



# ಹೋಗಿಬಿಟ್ಟು ಬರುತ್ತೇನೆ

"ಹಾಗಾದರೆ, ನಾನು ಹೋಗಿಬಿಟ್ಟು ಬರುತ್ತೇನೆ" ಎಂದು ಹೇಳಿ ಗೋವಿಂದರಾಯರು ಎದ್ದರು. "ತಾಳಿ! ಅವಸರ ಏನು? ಊಟ ಮಾಡಿ ಕೊಂಡು ಹೋಗೋಣವಂತೆ" ಎಂದು ಪದ್ಧತಿಯಂತೆ ಉಪಚಾರ ಮಾತನ್ನಾಡಿದರು, ಗೋಪಾಲಯ್ಯನವರು.

ಗೋವಿಂದರಾಯರದು ತುಂಬಾ ಮೃದುವಾದ ಹೃದಯ. ಯಾರನ್ನೂ ನೋಯಿಸಬಾರದು, ಯಾರಿಗೂ ತಮ್ಮಿಂದ ತೊಂದರೆ ಆಗಬಾರದು ಎಂಬುದು ಅವರ ಮತ. 'ಪರೋಪಕಾರಾರ್ಥ ಮಿದಂ ಶರೀರಂ' ಎಂಬುದೇ ಅವರ ಜೀವನದ ಮೂಲ ಮಂತ್ರ. ಯಾರು ಯಾವ ಕೆಲಸವನ್ನು ಹೊರಿಸಿದರೂ, ಸಂತೋಷದಿಂದ ಮಾಡಿ ತೀರಿಸುವರು. ಅವರವರಿಗೆ ಬೇಕಾದ ಪದಾರ್ಥ ಗಳನ್ನು ಅಗ್ಗವಾಗಿ ಕೊಂಡು ಅಂಗಡಿಯಿಂದ ಮನೆ ಬಾಗಲಿಗೆ ಹೊತ್ತು ತರು ವರು. ಮಕ್ಕಳನ್ನು ಆಡಿಸುವುದರಲ್ಲಿಯೂ, ಅವರಿಗೆ ತಕ್ಕಹಾಗೆ ಹಾಡಿ, ನಲಿದು, ನಕ್ಕು, ಕುಣಿಯುವುದರಲ್ಲಿಯೂ ಅವರು ಅದ್ವಿತೀಯರು. "ಚಿನ್ನ ದಂಥ ಮನುಷ್ಯ ಗೋವಿಂದರಾಯ!" ಎಂದು ಅವರನ್ನು ಎಲ್ಲರೂ ಹೊಗಳುವರು.

ಆದ್ದರಿಂದ, ತಾವು ಹೊರಟುಬಿಡಬೇಕೆಂದು ಹಠ ಹಿಡಿದರೆ, ಗೋಪಾಲ ಯ್ಯನವರ ಮನಸ್ಸು ಎಲ್ಲಿ ನೊಂದೀತೋ ಎಂದು ಅನುಮಾನಿಸಿ ರಾಯರು, "ನಾನು ಊಟಕ್ಕೆ ನಿಂತರೆ, ತಮಗೆ ತೊಂದರೆ.... ..." ಅಂತ ಪ್ರಾರಂಭಿಸಿದರು. ತಮ್ಮ ಉಪಚಾರದ ಮಾತನ್ನು ಮೀರಲಾರದೆ ಎಲ್ಲಿ ನಿಂತೇಬಿಡುತ್ತಾರೋ ಎಂಬ ದಿಗಿಲು ಗೋಪಾಲಯ್ಯನವರಿಗೆ! ಆದರೂ "ಅಯ್ಯೊ, ಅಯ್ಯೊ! ಹಾಗಂದರೇನು?" ಅಂತ, ಯಾವ ಅರ್ಥವನ್ನು ಬೇಕಾದರೂ ಸೂಚಿಸು ವಂತಹ ಉತ್ತರವೊಂದನ್ನು ಪ್ರಯೋಗಿಸಿದರು. "ತಮಗೆ ತೊಂದರೆ ಆಗುತ್ತೋ ಅಂತ ಹಿಂಜರಿದೆ, ಅಷ್ಟೆ! ಊಟವಾದ ಮೇಲೆಯೇ ಹೋಗುತ್ತೇನೆ, ಅದ ಕ್ಕೇನು?" ಅಂತ ಗೋವಿಂದರಾಯರು ಮತ್ತೆ ಕುರ್ಚಿಯಲ್ಲಿ ಕುಳಿತೇಬಿಟ್ಟರು.

ಊಟ ಆಯಿತು. ಎಲೆ ಅಡಿಕೆ ಆದ ಕೂಡಲೇ, "ಬಿಸಿಲು ಬಲವಾಗಿದೆ ಛತ್ರಿ ಕೊಡುತ್ತೇನೆ, ಹಿಡಿದುಕೊಂಡು ಹೋಗಿ" ಅಂತ ಗೋಪಾಲಯ್ಯನವರು ಉಪಚಾರ ಹೇಳಿದರು. ಅದಕ್ಕೆ ರಾಯರು, "ಬೇಡಿ, ಬೇಡಿ! ತಮಗೆ ಯಾಕೆ ತೊಂದರೆ? ಎಲ್ಲಿಗಾದರೂ ಹೋಗಬೇಕಾದರೆ, ತಮಗೇ ಆಗಲಿ, ಮಕ್ಕಳಿಗೇ ಆಗಲಿ. ಛತ್ರಿ ಬೇಡವೆ? ಅದನ್ನ ಹಿಂದಕ್ಕೆ ಕಳುಹಿಸುವುದಕ್ಕೆ ನಾನು ತಡ ಮಾಡಿದರೂ ಮಾಡಿದೆ, ನಮ್ಮ ಮನೆ ಹುಡುಗರು ಯಾವಾಗ ತಂದುಕೊಡುತ್ತಾರೋ, ಏನೋ? ಬಿಸಿಲೂ ಕೂಡ ಅಷ್ಟು ಜೋರಾಗಿಲ್ಲ" ಅಂತ ಹೇಳುತ್ತಿದ್ದಾಗಲೇ, ಎಲ್ಲಿ ಗೋಪಾಲಯ್ಯನವರ ಮನಸ್ಸು ನೊಂದೀತೋ ಎಂದು ಭಯಪಟ್ಟು, "ಚಿಂತೆಯಿಲ್ಲ. ನನಗೇನು ಅಂತಹ ತಲೆ ಹೋಗುವ ಕೆಲಸ ಯಾವುದೂ ಇಲ್ಲ. ಒಂದರಗಳಿಗೆ ತಣ್ಣಗೆ ಇಲ್ಲೇ ಮಲಗಿಬಿಟ್ಟು, ಆಮೇಲೆ ಹೊರಡುತ್ತೇನೆ, ಸಾಕು!" ಅಂತ ಕುಳಿತೇಬಿಟ್ಟರು!

ಸರಿ! ಅವರಿಗಾಗಿ ಹುಡುಗರ ಆಟದ ಕೋಣೆಯನ್ನು ಖಾಲಿ ಮಾಡಿ, ಗುಡಿಸಿ, ಕಿಟಕಿಗಳನ್ನೆಲ್ಲಾ ಒದ್ದು ತೆಗಿಸಿ, ಮುಂದಳಿಗೆ ಹಾಸಿದ್ದಾಯಿತು. ಗೋಪಾಲಯ್ಯನವರು, "ವಿಶ್ರಾಂತಿ ತೆಗೆದುಕೊಳ್ಳೋಣವಾಗಲಿ" ಎಂದು ಅವರನ್ನು ಕರೆದು ತಂದು ರೂಮಿನೊಳಕ್ಕೆ ಸೇರಿಸಿ, ಬಾಗಿಲು ಹಾಕಿದರು. "ಒಳ್ಳೇ ಗ್ರಹಚಾರವಾಯಿತು ಈ ಹಾಳು ಉಪಚಾರದಿಂದ!" ಅಂತ ಗೊಣಗುತ್ತಾ ಗೋಪಾಲಯ್ಯನವರು ತನ್ನ ಆರಾಮದ ಕುರ್ಚಿಯಲ್ಲಿ ಒರಗಿದರು.

ಮೂರು ಗಂಟೆ ಆಯಿತು. ಮೂರೂಕಾಲಾಯಿತು. ಗೋವಿಂದರಾಯರು ಮೆಲ್ಲಗೆ ಹೊರಗೆ ಬಂದರು. "ಇನ್ನು ನಾನು ಹೋಗಿಬಿಟ್ಟು ಬರುತ್ತೇನೆ! ತಂಪು ಹೊತ್ತಾಯಿತಲ್ಲಾ!" ಎಂದು ಹೇಳುತ್ತಾ ಗೋಪಾಲಯ್ಯನವರ ಸಮೀಪಕ್ಕೆ ಬಂದರು. ಆಗ ಸಮಯ ಎಂಥಾದ್ದು ಅಂತೀರೋ? ಗೋಪಾಲಯ್ಯನವರು ಕಾಫಿ ಬಟ್ಟಲನ್ನು ಎತ್ತಿ ಬಾಯಿಗೆ ಹಿಡಿಯುವ ಹೊತ್ತು! ಇನ್ನೇನು, "ಕಾಫಿ ಆಗಲಿ! ಆಮೇಲೆ ಹೊರಡುವಿರಂತೆ!" ಅಂತ ಹೇಳಲೇಬೇಕಾಯಿತು. ಒಳಗೆ, ಅಡಿಗೆ ಮನೆ ಡಬ್ಬದಲ್ಲಿ, ಕಾಫಿ ಪುಡಿ ಇರಲಿಲ್ಲ—ಪುಡಿಗಾಗಿ ಅವರ ಸಹಧರ್ಮಿಣಿಯು ಪಕ್ಕದ ಮನೆಗೆ ಪಾಪಚ್ಚಿಯನ್ನು ಬೇಗನೆ ಅಟ್ಟಿದಳು. ಅಲ್ಲಿ ನಿರಾಶಳಾದಾಗ, ಆದರಾಚೆ ಮನೆಗೆ ಹೋಗೆಂದಳು.

" ಗಳಿಗೆ ಗಳಿಗೆಗೂ ನಿಮಗೆ ಕಾಫಿಪುಡಿ ಕೊಡುವುದಕ್ಕೆ ಇದೇನು ನಿಮ್ಮ ಮನೆ ಉಗ್ರಾಣವೋ ?" ಅಥವಾ " ಇಲ್ಲಿ ಚಿಲ್ಲರೆ ಅಂಗಡಿ ಇಟ್ಟುಕೊಂಡಿದೇವೆಯೋ ?" ಅಂತ ಆ ಮನೆಯವರು ಗದರಿಸಿದ್ದರಿಂದ ಪಾಪಚ್ಚಿ ಅಳುತ್ತಾ ಹಿಂದಕ್ಕೆ ಬಂದಳು. ಆದ್ದರಿಂದ ಶಾಂತುವನ್ನು ಎದುರು ಮನೆಗೆ ಓಡಿಸ ಬೇಕಾಯಿತು. ಅವರು ಕೊಟ್ಟ ಬೀಜವನ್ನು ಹುರಿದು, ಕುಟ್ಟಿ, ಕಾಫಿ ತಯಾರುಮಾಡುವ ಹೊತ್ತಿಗೆ, ನಾಲ್ಕೂವರೆ ಗಂಟೆ !

" ಇನ್ನೇನು ಸ್ವಾಮಿ ! ತಮ್ಮ ಇಷ್ಟದ ಪ್ರಕಾರ ಕಾಫೀನೂ ಆಯಿತಲ್ಲಾ. ಹೋಗಿಬಿಟ್ಟು ಬರುತ್ತೇನೆ !" ಅಂತ ಗೋವಿಂದರಾಯರು ಹೇಳಿದಾಗ ಗೋಪಾಲಯ್ಯನವರು ನಗುನಗುತ್ತಾ, " ಬೆಳಿಗ್ಗೆ ಬಂದವರನ್ನು ಅನ್ಯಾಯ ವಾಗಿ ಇದುವರೆಗೂ ನಿಲ್ಲಿಸಿಕೊಂಡುಬಿಟ್ಟೆ ! ಕ್ಷಮಿಸಬೇಕು !" ಅಂತ ಉಪ ಚರಿಸಿ, ವಿನಯದಿಂದ ಎದ್ದುನಿಂತರು. ಆಗ ಗೋಪಾಲಯ್ಯನವರ ಆರನೆಯ ಹುಡುಗ ಮುದ್ದು, " ಅಣ್ಣಾ ! ಲೆಯಿಲಾಟ ಆಡೋಣ, ಬಾಣ್ಣ " ಅಂತ ತೊದಲುತ್ತಾ ಒಳಗೆ ನುಗ್ಗಿದ. " ಈ ಅಪಶಕುನ ಏಕೆ ಬಂತೀಗ " ಅಂತ ಅಸಹ್ಯಪಟ್ಟು, ಗೋಪಾಲಯ್ಯನವರು " ಹೋಗೋ ಆಚೆ ! ಹೋಗುತ್ತೀಯೋ ಇಲ್ಲವೋ ?" ಅಂತ ಅವನ ಮೇಲೆ ರೇಗಿಬಿದ್ದರು. " ಛೆ, ಛೆ ! ಹಾಗೆ ಮಾಡಬೇಡಿ ! ಮಕ್ಕಳಿಗೆ ಪಾಪ, ಆಟ ಅಂದರೆ ಅಷ್ಟು ಆಸೆ. ಇರಲಿ. ನನಗೇನು ಅಂತಹ ಅಗತ್ಯವಾದ ಕೆಲಸ ಯಾವುದೂ ಇಲ್ಲ. ನಾನು ಇಲ್ಲೇ ಇದ್ದು, – ಇವನ ಹೆಸರೇನು ? ಮುದ್ದು ! – ಮುದ್ದು ಸಂಗಡ ಒಂದೆರಡು ಗಳಿಗೆ ಆಡಿಬಿಟ್ಟೇ ಹೋಗುತ್ತೇನೆ, ಮನೆಗೆ " ಅಂತ ಮತ್ತೆ ನಿಂತೇಬಿಟ್ಟರು ! ಗೋಪಾಲಯ್ಯನವರು ಏನನ್ನೋ ಮನಸ್ಸಿನಲ್ಲೇ ಅಂದುಕೊಂಡು, " ಬೇಡಿ ! ಬೇಡಿ ! ಹುಡುಗರಿಗೆ ತಮ್ಮ ಹಟ ಸಾಧಿಸಿದಷ್ಟೂ ತುಂಟತನ ಹೆಚ್ಚುತ್ತೆ. ನಿಮ್ಮ ಪಾಡಿಗೆ ನೀವು ಹೊರಡಿ !" ಅಂತ ಕೊಂಚ ಕಠಿಣವಾಗಿಯೇ ಹೇಳಿಬಿಟ್ಟರು. ಆದರೂ, ಗೋವಿಂದರಾಯರು ಅದನ್ನು ಮನಸ್ಸಿಗೆ ಕೊಂಚವೂ ತಂದುಕೊಳ್ಳದೆ, ಅಂಗಿ - ರುಮಾಲನ್ನು ಬಿಚ್ಚಿ ಇರಿಸಿ, ಮಂಡಿಮಡಿಸಿ ನೆಲದ ಮೇಲೆ ಕೈಗಳನ್ನೂ ಊರಿ, ನಿಂತೇಬಿಟ್ಟರು.

' ಲೆಯಿಲಾಟ ' ವಾಯಿತು, ಜಿಯಲಾಟವಾಯಿತು. ಓಬೇರಾಯನ ಕಥೆ ಹೇಳಿದರು. " ಶುದ್ಧ ಪೋಲಿ ಸುಬ್ಬಣ್ಣ " ಎಂಬ ಪದ್ಯವನ್ನು ಎಲ್ಲರ

ಕೈಲೂ ಗಟ್ಟಿ ಮಾಡಿಸಿದರು. ಅವರಿಗೆ ಕೋಲಾಟ ಕಲಿಸಿದರು. ಅಂದಿ ವಿನೋದ, ಅಭಿನಯ, ಸಂಗೀತ ಇವುಗಳಿಂದ ಯಾರಿಗೂ ಕತ್ತಲೆ ಆದದ್ದೆ ತಿಳಿಯಲಿಲ್ಲ. ರಾತ್ರಿ ೮ ಗಂಟೆಗೆ ಗೋಪಾಲಯ್ಯನವರು ಕ್ಲಬ್ಬಿಂದ ಮನೆ ಹಿಂತಿರುಗಿದರೆ, ಗೋವಿಂದರಾಯರ ಹುಡುಗಾಟ ಇನ್ನೂ ಮುಗಿದೇ ಇಲ್ಲ ಗೋಪಾಲಯ್ಯನನ್ನು ಕತ್ತು ಹಿಡಿದು ದಬ್ಬುವಷ್ಟು ಕೋಪಬಂತು. ಆದರೂ ತಡೆದು "ಗೋವಿಂದರಾಯರೇ! ಚಿನ್ನದಂಥಾ ಮನುಷ್ಯರೆಂದರೆ ನೀವು ಸ್ವಾಮಿ! ಬೆಳಗ್ಗಿಂದ ಇದುವರೆಗೂ ನಮ್ಮ ಮನೆಯಲ್ಲೇ ಒದ್ದಾಡುತ್ತಿದಿ ರಲ್ಲಾ, ನಿಮಗೆ ಬೇಜಾರಗೀಜಾರ ಏನೂ ಇಲ್ಲವೇ ಸ್ವಾಮಿ!" ಅಂದರು. ಗೋವಿಂದರಾಯರು "ಇನ್ನು ನಾನು ಹೊರಡುತ್ತೇನೆ. ಬೇಜಾರು ಅಂ ಅಲ್ಲ! ಮಕ್ಕಳಿಗೆ ಹಸಿವಾಗಿರಬೇಕು. ಹೋಗಿರೋ! ಊಟಮಾಡಿರೋ ನಾನೂ ಹೋಗಿಬಿಟ್ಟು ಬರುತ್ತೇನೆ!" ಅಂದರು.

ಗೋಪಾಲಯ್ಯನವರು ಊಟಕ್ಕೆ "ತಾವೂ ಬನ್ನಿ" ಅಂತ ಮಾತ ಎತ್ತಲೇ ಇಲ್ಲ. ಮಕ್ಕಳನ್ನು ದುರದುರನೆ ನೋಡುತ್ತಾ, ಯಾರೂ ರಾಯ ರನ್ನು ಮಾತನಾಡಿಸಬಾರದೆಂದು. ಕೈಸನ್ನೆಯಿಂದ ಕಟ್ಟಪ್ಪಣೆ ಮಾಡಿದರು ಗೋವಿಂದರಾಯರು ಅಂಗಿಯನ್ನು ಹಾಕಿಕೊಂಡು, ರುಮಾಲನ್ನು ಕೈಯ್ಯ ಹಿಡಿದು, ಹೊಸಲು ದಾಟಿದರು, ಯಾರೂ ತುಟಿ ಪಟಿಕನ್ನಲಿಲ್ಲ. ಗೇಟಿ ಬಳಿ ಹೋದರು. ಎಲ್ಲವೂ ಮೌನ. ಬೀದಿಯಲ್ಲಿ ರಸ್ತೆಗೆ ಕಾಲಿಟ್ಟರು ಹತ್ತು ಗಜ ಮುಂದೆ ಹೋದರು. "ಬದುಕಿದೆ!" ಅಂತ ಗೋಪಾಲಯ ನವರು ತಮ್ಮ ತಲೆಯ ಮೇಲಿಂದ ರುಮಾಲನ್ನು ತೆಗೆದು ಕುರ್ಚಿಯ ಮೇ ಎಸೆದರು.



# ಸಾಹಿತ್ಯೋಪಾಸಕರಿಗೆ ಕೆಲವು ಸಲಹೆಗಳು

---

## ೧. ಸಣ್ಣ ಕತೆಗಳ ಬರವಣಿಗೆ

ಸಣ್ಣ ಕತೆ ಸಣ್ಣದಾಗಿರಬೇಕಾಗಿಲ್ಲವೆಂದು ಎಲ್ಲರಿಗೂ ತಿಳಿದಿದೆ. ಕುಳ್ಗತೆ ಆಗಿರಬಹುದು ; ನೀಳ್ಗತೆ ಆಗಿರಬಹುದು. ಮುಖ್ಯವಾಗಿ, ಇದುವರೆಗೂ ಸಾಹಿತಿಗಳು ಯಾರನ್ನೂ (ಮತ್ತು ಯಾವುದನ್ನು) ಸಣ್ಣದೆಂದು ದೂರ ಮಾಡಿದ್ದರೋ ಅವರ (ಮತ್ತು ಅವುಗಳ) ವಿಷಯವಾಗಿ ಸನ್ನಿವೇಶಗಳನ್ನು ಕಲ್ಪಿಸಿ, ಜೋಡಿಸಿರಬೇಕು, ಅಷ್ಟೆ. "ನಾಗಿಯ ಗಂಡಂದಿರು," "ಬೆಟ್ಟಾಚಾರಿ ಹೆಂಡ ಕುಡಿದದ್ದು," "ಕಾಡುಕೋಳಿ," "ಹಾವಾಡಿಗನ ಹಾವಳಿ," "ನಮ್ಮೂರಿನ ನಕುಲಸಹದೇವರು," "ಮುದ್ದಕ್ಕನ ಮಹಾಪರಾಧ," "ಸುಂಕ ಕೊಡದ ಸೂಳೆ"—ಎಂಬ ಪ್ರಸಿದ್ಧ ಕಥೆಗಳನ್ನು ಒಂದುಸಾರಿ ಓದುವುದಕ್ಕಿಂತ ಹೆಚ್ಚಾದ ತಯಾರಿ ಇಂದು ಯಾವ ಬರಹಗಾರನಿಗೂ ಬೇಕಿಲ್ಲ.

ಸಣ್ಣ ಕತೆಗಳಿಗೆ ಹೆಸರೇ ಉಸಿರು. ಅನೇಕ ಕತೆಗಳನ್ನು ಓದಿದರೆ, ಇಂತಹ ಹೆಸರಿಟ್ಟಮೇಲೆ ಏಕೆ ಗ್ರಂಥಕರ್ತನು, ಪಾಪ, ವೃಥಾ ಶ್ರಮಪಟ್ಟು, ಕತೆ ಬರೆದನೋ, ಅಂತ ಅನ್ನಿಸುತ್ತದೆ. ಸಣ್ಣ ಕತೆಗಳು ಹೆಸರುಗಳಲ್ಲೇ ಅಡಕವಾಗಿರಬೇಕು. ಆದ್ದರಿಂದಲೇ, "ತಿಮ್ಮಿಯೋ, ಅಲ್ಲವೊ ?" "ಸಾರಿಗೆ ಉಪ್ಪು ಸಾಲದೆ ?" "ಆದದ್ದೇನು ?" ಎಂಬ ಕತೆಗಳು ವಿಮರ್ಶಕವೃಂದಕ್ಕೆ ಸಂಪೂರ್ಣ ಸಂತೃಪ್ತಿಯನ್ನು ಕೊಡದೆ ಇದ್ದದ್ದು. ಸಾಲಸೋಲ, ಚಳುವಳಿ, ಹೋಟಲು ಸಿನೀಮಾ, ರೆಯಿಲು ಫೆಯಿಲು ಎಂಬ ತಾಪದ್ವಯ ಚತುಷ್ಟಯುಗಳಿಗೆ ಸಿಲುಕಿ ನರಳುತ್ತಿರುವ ಶ್ರೀಮಾನ್ ಬೋರೇಗೌಡರವರನ್ನು ಹಠಾತ್ತಾಗಿ ನಿಲ್ಲಿಸಿ, "ಭೀಮಪ್ಪನು ಹುಚ್ಚನೇ ?" ಎಂದು ಕೇಳಿದರ, ಕೆನ್ನೆಗೆ ಏಟು ಬಿದ್ದೀತು. ಅದಕ್ಕಿಂತ "ತಿಮ್ಮಿಯಲ್ಲ, ಬೊಮ್ಮಿ" ಎಂದು ಶಿರೋನಾಮೆಯಲ್ಲಿ ಹೇಳಿಬಿಡುವುದೇ ಮೇಲು. ಹಾಗೆಯೇ "ಸಾರಿಗೆ ಉಪ್ಪು ಸಾಲದು" ಎಂದು ಒಪ್ಪಿಕೊಂಡರೆ ತಪ್ಪೇನು ? "ಆದದ್ದೇನು ? ಅನಾಹುತ"

ಎಂದು ಮೊದಲೇ ತಿಳಿಸಿದ್ದರೆ, ವಾಚಕರಿಗೆ ಕಥೆಯನ್ನೋದುವುದಕ್ಕಿಂತ ಹೆಚ್ಚು ಸಂತೋಷವನ್ನು ಒದಗಿಸಿದ ಹಾಗಾಗಲಿಲ್ಲವೆ ? ಯೋಚಿಸಿ. ಚೆನ್ನಾಗಿ ಯೋಚನೆ ಮಾಡಿದಮೇಲೆ, ನೀವೂ ಕತೆ ಬರೆಯಲು ಮೊದಲುಮಾಡಿ.

ಪ್ರಾರಂಭ ಮಾಡಿದಮೇಲೆ, ತನ್ನ ಕತೆಯು ' ದೊಡ್ಡ ' ಗುಂಪಿಗೆ ಸೇರಿದ್ದೋ, ಅಥವಾ ' ಸಣ್ಣ ' ಗುಂಪಿಗೆ ಸೇರಿದ್ದೋ ಎಂಬುದನ್ನು ಮೊದಲನೆಯ ಹತ್ತು ಹನ್ನೆರಡು ಮಾತುಗಳಿಂದಲೇ ತಿಳಿಸಿಬಿಡುವುದು ಉಚಿತ. ಇದು ಇಂದಿನ ಸಾಹಿತ್ಯಧರ್ಮ.

ಉದಾಹರಣೆಗೆ :—

| **ದೊಡ್ಡ ಕತೆ** | **ಸಣ್ಣ ಕತೆ** |
|---|---|
| ೧. ಹುಣ್ಣಿಮೆಯ ತಣ್ಣದಿರನ ತುಂಬುಬಿಂಬವು ಬಿತ್ತರದ ಬಾಂದಳದಲ್ಲಿ ತೊಳಗಿ ತೇಲುತ್ತಾ ಮೋಡಗಳ ತೆರೆಮರೆಯಲ್ಲಿ ಮರೆಯಾಗಿ, ಮರಳಿ ಮೈದೋರಿ – ಇತ್ಯಾದಿ. | ೧. ರಾಮಯ್ಯನಿಗೆ ವಯಸ್ಸು ಎಪ್ಪತ್ತೆರಡು. |
| ೨. ಶಿವೂಬಾಯಿಯ ಹಿಂದೆ, ಅವಳ ಹತ್ತು ಹನ್ನೆರಡು ವಯಸ್ಸಿನ ಮೊಮ್ಮಗಳು ಪುಟ್ಟಪುಟ್ಟ ಹೆಜ್ಜೆ ಹಾಕುತ್ತಾ ಬರುತ್ತಿದ್ದಳು. | ೨. ಕತ್ತಲೆ, ಕಾಡುದಾರಿ, ಪಿಶಾಚಿ..... ಇನ್ನೇನು ಹೇಳಲಿ? |
| ೩. ಗೋಪಾಲಯ್ಯ, ನಾನು, ಮಾಧವರಾಯರು, ಮೂವರೂ ಆರಾಮದ ಕುರ್ಚಿಗಳಲ್ಲಿ ಕುಳಿತು, ಹರಟೆ ಹೊಡೆಯುತ್ತಿದ್ದೆವು. | ೩. ನಾಗತ್ತೆ ಭಾವಿಯಪತ್ರ ಬಂದಳು. |
| ೪. ಪ್ರಪಂಚದಲ್ಲಿ ಅನಾದಿಯಿಂದಲೂ ನಡೆದು ಬರುತ್ತಿರುವ ನಿಯಮಗಳಿಗನುಸಾರವಾಗಿಯೋ, ಎಂಬಂತೆ........ಇತ್ಯಾದಿ. | ೪. "ಏನು ರಾಯರೆ ಬಂದಿದ್ದು ?" "ಏನು ಇಲ್ಲ, ಸ್ವಾಮಿ." |

ಕತೆಯನ್ನು ಪ್ರಾರಂಭಿಸಿದ್ದಾಯಿತು ; ಮುಗಿಸುವುದು ಹೇಗೆ, ಎಂಬುದೇ ತುಂಬಾ ಗಡುಸಾದ ತೊಡಕು. ಆದರೆ, ಇದಕ್ಕೂ ಯಾರೂ ಹೆದರಬೇಕಾಗಿಲ್ಲ. ಎಂದಿಗೆ ನಮ್ಮ ಕತೆ ಮುಗಿಯುತ್ತದೆ ಎಂಬುದು ಇನ್ನು ಮುಂದೆ ಯಾರೂ ತವಕಪಡಬೇಕಾಗಿಲ್ಲ. ಅದನ್ನು ಪೂರ್ಣಗೊಳಿಸಲು ಮೂರು ಉಪಾಯಗಳಿವೆ. ಅವುಗಳ ಸಹಾಯದಿಂದ ಎಂತಹ ವಿಷಮ ಪರಿ

ಸ್ಥಿತಿ ಬಂದೊದಗಿದರೂ "ಸಂಪೂರ್ಣ ಮುಚ್ಯತೆ" ಎಂಬಂತೆ ಕತೆಯನ್ನು ಸಂಪೂರ್ಣವಾಗಿ ಬರೆದು, ಪುಸ್ತಕವನ್ನು ಮುಚ್ಚಬಹುದು.

(೧) ಕತೆಯು ಮುಂದೆ ಸಾಗದೆಹೋದರೆ, "ವಾಚಕ ಮಹಾಶಯರೆ! ಬೆಟ್ಟಾಚಾರಿ ಹೆಂಡ ಕುಡಿದ ವಿಷಯವನ್ನು ಕುರಿತು ಇಷ್ಟು ಬರೆದದ್ದಾಯಿತು. ಇನ್ನು ಮುಂದೆ, ಅವನಿಗೂ ನನಗೂ ಕಣ್ಣು ಕಾಣದು, ಮೈನಡುಗುತ್ತಿದೆ, ಮೊಬ್ಬು ಕವಿದಿದೆ, ಜ್ಞಾನ ನೆಟ್ಟಗಿಲ್ಲ............ನಮಸ್ಕಾರ" ಎಂದು ಮರ್ಯಾದೆಯಿಂದ ತಪ್ಪಿಸಿಕೊಳ್ಳುವುದೇ ಮೇಲು.

(೨) ಕತೆಯನ್ನು ಹಠಾತ್ತಾಗಿ ನಿಲ್ಲಿಸಿದರೆ, ವಾಚಕರು ರೇಗಿಬೀಳುವರಲ್ಲಾ ಎಂಬ ಭೀತಿಯಿದ್ದರೆ (ಆ ಭೀತಿಗೆ ಏನೂ ಬುಡವಿಲ್ಲ) ಬರಹಗಾರನು, "ಭೀಮಪ್ಪನ ಸಾಹಸ ಕಾರ್ಯಗಳೆಲ್ಲವೂ ಮುಗಿಯಿತು. ಮುಂದಿನ ಉಗಾದಿ ದಿನವೇ ಜ್ವರತಗುಲಿ, ಅವನು ತೀರಿಹೋದನು ಎಂದು ಜನರು ಹೇಳುತ್ತಾರೆ, ಆದರೆ ನಿಜಸ್ಥಿತಿಯನ್ನು ಬಲ್ಲವರಾರು?" ಎಂದು ಬರೆದೋ, ಅಥವಾ "ಸನ್ಯಾಸಿಯು ಗೃಹಸ್ಥನಾದನು. ಮುಂದೇನಾಯಿತು? ಶಿವನೇ ಬಲ್ಲ?" ಎಂಬುದಾಗಿಯೋ, ಮುಗಿಸಿ, ಪೂರ್ಣ ವಿರಾಮ ಹಾಕಿಬಿಡಬಹುದು. ವಾಚಕರೂ ಕೃತಜ್ಞತೆಯಿಂದ ಗ್ರಂಥವನ್ನು ಮುಚ್ಚುವರು.

(೩) ಕತೆಯನ್ನು ತೋರಿದ ಕಡೆಯಲ್ಲಿ ಮುಗಿಸುವುದಕ್ಕೆ ಇನ್ನೊಂದು ಉಪಾಯವೂ ಉಂಟು. ಅದನ್ನು ಈ ಉದಾಹರಣೆಯಿಂದ ತಿಳಿದುಕೊಳ್ಳಬಹುದು. "ರಾಮಮೂರ್ತಿಯ ಮದುವೆ" ಎಂಬ ಕಥೆಯಲ್ಲಿ, ರಾಮಮೂರ್ತಿಯೂ, ಅವನ ತಾಯಿತಂದೆ, ನೆಂಟರಿಷ್ಟರೂ, ಸೋಮನಹಳ್ಳಿಗೆ ಅವನ ಮದುವೆಗಾಗಿ ಹೋಗುವ ಸನ್ನಿವೇಶವನ್ನು ವಿವರಿಸುವಾಗ, ಗ್ರಂಥಕರ್ತನಿಗೆ ತನ್ನ ಮದುವೆಯು ಜ್ಞಾಪಕಬಂದು ಲೇಖಣಿ ಮುಂದೆ ಸಾಗದಿದ್ದರೆ, ನಡು ದಾರಿಯಲ್ಲೇ ಪ್ರತಿಭೆಯಸೊದರು ಆರಿಹೋದರೆ, ಕೂಡಲೇ, ಮೂರು ಚುಕ್ಕಿಗಳನ್ನು ಹಾಕಿ, "ಲೋ, ರಾಮೂ! ಲೋ! ರಾಮೂಊ! ಲೋ ರಾಮೂಊಊ" ಎಂದು ಮೂರು ಸಾರಿ ಕೂಗಿಸಿ, ರಾಮುವನ್ನು ಗಾಢನಿದ್ರೆಯಿಂದೆಬ್ಬಿಸಿ, ಅದುವರೆಗೂ ಬರೆದದ್ದೆಲ್ಲವೂ ಅವನ ಕನಸು ಎಂದು ವಾಚಕರಿಗೆ ತಿಳಿಸಿ, ಉಪಾಯದಲ್ಲಿ ಕಂಬಿಕಿತ್ತುಬಿಡುವುದೇ ಲೇಸು.

---

# ‘ ಇದು ’ ನ್ಯಾಯವೋ ?

“ ಮುಖ್ಯವಾಗಿ, ತಾವು, ಇಂತಹ ನನ್ನ ಇದರಲ್ಲಿ, ಇದು ಮಾಡಿದ್ದು ........”

“ ಅಯ್ಯೋ ! ಅಯ್ಯೋ ! ಇದೇನು ದೊಡ್ಡ ಸಹಾಯ, ಅಂತ ? ಅಲ್ಲಯ್ಯಾ, ನೀನು ಬಂದು ಇದು ಮಾಡಿದ್ದು ಹೆಚ್ಚೋ, ನಾನು, ಇದು........”

“ ಆದರೂ ತಮಗೆ, ಅದು – ಇದು, ಎಷ್ಟೋ ಇದ್ದರೂ, ನನ್ನನ್ನು ಇದು ಮಾಡದೆ, ಇಷ್ಟು ಇದಾಗಿ........”

“ ಇದೇನು ? ನೀನು, ಹೀಗೆ, ಇದು ಮಾಡುತ್ತೀಯಾ ! ನಾವಿಬ್ಬರೂ ಅಂತಹ ಇದಾಗಿದ್ದು........”

“ ಅದೇನೋ ಇದೇನೆ ಅನ್ನಿ ! ಆದರೂ, ಈಗಿನ ಇದರಲ್ಲಿ, ಯಾರು ತಾನೆ ಹೀಗೆ ಇದು ಮಾಡುತ್ತಾರೆ ?”

“ ಹಾಗಾದರೆ, ನಾನೇನು ನಿನ್ನನ್ನು ಇದು ಮಾಡಿ ಕಳುಹಿಸುತ್ತೇನೆ, ಅಂತ ಇದಾಗಿದ್ದಿಯೇನು ?”

“ ಇಲ್ಲ!– ಆದರೂ, ಇಲ್ಲಿ ಬಂದು ನಿಮ್ಮನ್ನು ಇದು ಮಾಡುವ ತನಕ, ಕೊಂಚ ಇದಾಗಿಯೇ ಇತ್ತು, ನನಗೆ. “

“ ನೋಡು, ಇವನೇ ! ಇದನ್ನೆಲ್ಲಾ ಇದು ಮಾಡಿಬಿಡಬೇಕು, ನೀನು. ಹಿಂದೆ ನಾವಿಬ್ಬರೂ ಒಂದೇ ಇದರಲ್ಲಿ ಇದು ಮಾಡುತ್ತಿದ್ದವರು, ಅಷ್ಟು ಇದಾಗಿದ್ದು, ಈಚೆಗೆ ಏನೋ ನೀನುಕೊಂಚ ಇದಾಗಿ ಹೋಗಿಬಿಟ್ಟ ಮಾತ್ರಕ್ಕೆ, ಶುದ್ಧ ಇದರವನ ಹಾಗೆ, ನಾನು ನಿನ್ನನ್ನು ಇದು ಮಾಡುವುದಿಲ್ಲ ಅಂತ ನೀನು ಇದು ಮಾಡಿಬಿಡುವುದೇ ? ಬಹಳ ಇದಾಗಿದೆ. ನಿನ್ನ ಇದು !”

“ ಇದೇನಿದು ? ತಾವು ಹೀಗೆ........”

“ ನೋಡು ! ನನ್ನನ್ನ ‘ ತಾವು, ಗೀವು ’ ಅಂತ ಇದು ಮಾಡುವುದು ಚೆನ್ನಾಗಿಲ್ಲ. ಹಿಂದೆ ಯಾವ ರೀತಿ ಇದಾಗಿದ್ದೆವೋ, ಹಾಗೆಯೇ, ಈಗಲೂ ಇದಾಗಿರೋಣ. ಇದರಲ್ಲೆಲ್ಲಾ ಏನಿದೆ ?”

" ಹಾಗಾದರೆ, ನನಗೆ ಇನ್ನೂ ಇದಾಯಿತು. "

" ಹಾಗೆಯೇ ಇದಾಗಿರಬೇಕು, ನೀನು. ಅದಿರಲಿ! ಈಗ ಯಾಕೆ ನೀನು ಇಷ್ಟು ಇದಾಗಿಬಿಟ್ಟಿದೀಯಾ, ಹೇಳು. "

" ಹತ್ತು ಹನ್ನೆರಡು ವರ್ಷಗಳಿಂದಲೂ ತಮಗೂ ನನಗೂ (ಕ್ಷಮಿಸಿ, ಇದಾಯಿತು) ನಿನಗೂ ನನಗೂ ಇದು ಅನ್ನುವುದೇ ಇಲ್ಲ. ಆದ್ದರಿಂದ, ನಿನಗೆ ನನ್ನ ಇದು ಇದಾಗಿಲ್ಲ. ಇದು ಮಾಡುತ್ತೇನೆ, ಕೇಳು : ನಿನಗೆ ಗೊತ್ತಿರುವ ಹಾಗೆ, ನಾನು ರೈಲ್ವೆ ಇದರಲ್ಲಿ, ಇದಾಗಿದ್ದೆನಲ್ಲಾ. ಅಲ್ಲಿಂದ, ನನ್ನನ್ನು ಇದು ಮಾಡಿಬಿಟ್ಟರು. ಆ ಮೇಲೆ, ಇನುವರೆಗೂ, ಎಲ್ಲೆಲ್ಲೋ ಇದು ಮಾಡಿದೆ; ಯಾರು ಯಾರನ್ನೋ ಇದು ಮಾಡಿದೆ. ಒಂದು ಪ್ರಾಣಿಯೂ ಕೂಡ, ನನ್ನ ಇದು ಹೇಳಿಕೊಳ್ಳುವುದಕ್ಕೆ ಒಂದಿಷ್ಟು ಇದೂ ಕೂಡ ಕೊಡಲಿಲ್ಲ. ಐದಾರು ಸಲ, ನೋಡು (ಇದುವರೆಗೂ ಇದನ್ನು ನಾನು ಯಾರ ಹತ್ತಿರವೂ ಇದು ಮಾಡಿಲ್ಲ, ತುಂಬಾ ಇದಾಗಿಟ್ಟಿರಬೇಕು, ನೀನು) ಐದಾರುಸಲ, ಸ್ವಸ್ಥವಾಗಿ ಇದು ಹಾಕಿಕೊಂಡು ಬಿಡೋಣ ಅಂತ ಕೂಡ. ಇದಾಯಿತು........ಈಗ, ಅದನ್ನೆಲ್ಲಾ ಇದು ಮಾಡಿದರೆ, ನನಗೆ ಇದಾಗುತ್ತೆ. " " ಅಯ್ಯೋ! ಪಾಪ! ಆಗ ನೀನು ಇದರಲ್ಲಿದ್ದಾಗ, ಖುಷಿಯಾಗಿ ಇದು ಮಾಡುತ್ತಿದ್ದದ್ದೇನು? ಒಳ್ಳೆ ಇದಾಗಿ........"

" ಅದನ್ನೆಲ್ಲಾ ಈಗ ಇದು ಮಾಡಿಕೊಂಡು ಇದೇನು? ಎಲ್ಲಾ ಬರಿಯದಾಗಹೋಯಿತು. ಇದರಿಂದ ನಾನು ನನ್ನ ಮನಸ್ಸಿನಲ್ಲಿ ಒಂದು ಇದು ಮಾಡಿಕೊಂಡು ಬಿಟ್ಟಿದ್ದೇನೆ: ನಮ್ಮ ಇದಕ್ಕೆ ಯಾರನ್ನೂ ಇದು ಮಾಡಿ ಪ್ರಯೋಜನವಿಲ್ಲ; ಅವರವರ ಇದನ್ನು ಅವರವರೇ ಇದು ಮಾಡಬೇಕೆ ಹೊರತು, ಬೇರೆ ಇದೇ ಇಲ್ಲ, ಅಂತ. "

" ಹಾಗಾದರೆ, ನಾನು ಈಗ ಇದು ಮಾಡಿದೆನಲ್ಲಾ, ಐದು ರೂಪಾಯಿ, ಇದಲ್ಲದೆ, ನಿನಗೆ ಬೇರೆ ಇದೇ ಇಲ್ಲ ಖರ್ಚಿಗೆ? ನಿನ್ನ ಹೆಂಡತಿ........"

" ಸದ್ಯಕ್ಕೆ ಅದೊಂದು ಇದಾಗಿಲ್ಲ ಇನ್ನೂ. ನನ್ನೊಬ್ಬನ ಇದನ್ನು ನಾನು ಇದು ಮಾಡಿಕೊಂಡರೆ, ಇದಾಗಿದೆ!"

" ಇಲ್ಲಿನೋಡು, ಇವನೇ! ನೀನು ಸುಮ್ಮನೆ ಅಲ್ಲಿ ಇಲ್ಲಿ ಇದು ಮಾಡ ಬಾರದು. ದೇವರು ನನಗೆ ಇದ್ದದ್ದರಲ್ಲಿ ಇದು ಮಾಡಿದಾನೆ. ನಿನಗೆ ಎಲ್ಲಾ

ದರೂ ಒಳ್ಳೆ ಇದಾಗಿ ಇದಾಗುವತನಕ, ತಿಂಗಳಿಗೆ ಹತ್ತು ರೂಪಾಯಿ (ಅದ ಕ್ಕಿಂತ ಇದಾಗಿ ಇದು ಮಾಡುವುದಕ್ಕೆ ನನಗೆ ಇದು ಸಾಲದು) ಹತ್ತು ರೂಪಾಯಿ ನಾನು ಇದು ಮಾಡುತ್ತೇನೆ. ನೀನು........"

"ಆಗಲಿ! ಆದರೆ, ನೀವು (ಮತ್ತೆ ಇದಾಯಿತು, ಇದು ಮಾಡ ಬೇಕು) ನೀನು ಒಂದು ಇದು ಮಾಡುವುದಾದರೆ........"

"ಏನಿದು! ನೀನು........"

"ಇನ್ನೇನೂ ಇದು ಮಾಡುವುದಿಲ್ಲ, ನಾನು - ನನಗೆ ಎಲ್ಲಾದರೂ ಒಂದು ಇದು ಸಿಕ್ಕಿದ ತಕ್ಷಣ, ನೀನು ಇದು ಮಾಡಿದ ಇದನ್ನೆಲ್ಲಾ ನಾನು ಮತ್ತೆ ಇದು ಮಾಡಿಬಿಡುತ್ತೇನೆ. ನೀನು ಒಲ್ಲೆ, ಗಿಲ್ಲೆ, ಅಂತ ಇದು ಮಾಡ ಬಾರದು."

"ಆಗಲಿ, ಇದಕ್ಕೇನು? ವಿದ್ಯಾರ್ಥಿಯಾಗಿದ್ದಾಗಲೇ, ಯಾರು ಏನು ಇದು ಮಾಡಿದ್ದರೂ, ಅದನ್ನು ಎಷ್ಟೇ ಇದಾದರೂ, ನೀನು ಇದು ಮಾಡುತ್ತಿದ್ದುದು ನನಗೆ ಇದು ಇದೆ. ಈಗಲೇ ಯಾಕೆ ಅದರ ಇದು? ಚಾಕರಿಸಿಕ್ಕಿದ ಮೇಲೆ, ಇದು ಮಾಡುವುದಕ್ಕೆ ನಿನಗೆ ಇದಾದರೆ, ಮಾಡು; ಇಲ್ಲದಿದ್ದರೆ, ಬಿಡು. ಅಂತು, ನಾನು ಮಾತ್ರ ನಿನ್ನ ಇದನ್ನು ಇದು ಮಾಡಿಕೊಂಡು, ಸುಮ್ಮನೆ ಇದಾಗಿ, ಇರಲಾರೆ."

"ಹುಂ, ನನ್ನ ಇದರಲ್ಲೇನಿದೆ? ನಿನ್ನ ಇದಕ್ಕೆ ಇದಾಗಿ, ನಾನು ಯಾವ ಇದನ್ನೂ ಇದು ಮಾಡಲಾರೆ."



# ಸಂಗೀತ

೧

“ಯಾವನೋ ಬಂದು ನಮ್ಮ ಮನೆ ಹಾರ್ಮೋನಿಯಮನ್ನು ಕದ್ದು ಕೊಂಕುಳಲ್ಲಿರಿಸಿಕೊಂಡು ಓಡಿಹೋಗುವಹಾಗೆ ಕನಸಾಯಿತು.”

“ಓ! ಆವಾಗ ನೀನೇನು ಮಾಡಿದೆ?”

“ನಾನೇ? ಯಾಕೆ ಓಡುತ್ತೀಯಾ, ಮಂಕೆ! ನಿಧಾನವಾಗಿ ನಡಿಯೋ” ಎಂದು ಕೂಗಿದೆ.

೨

ಕಛೇರಿ ಮುಗಿಯಿತು. ಸಂಗೀತಕಾರನ ಸಮೀಪಕ್ಕೆ ಸಭಿಕರಲ್ಲೊಬ್ಬರು ಬಂದರು. ಬಿಟ್ಟಕಣ್ಣು ಬಿಟ್ಟಹಾಗೆ ಅವನನ್ನು ನೋಡಿ ಬೆರಗಾದರು. ಆಮೇಲೆ, “ಸ್ವಾಮಿ! ನಾನು ಸಾವಿರಕಟ್ಟಲೆ ಸಂಗೀತಕಾರರನ್ನು ನೋಡಿ ದೇನೆ. ಹುಬ್ಬಳ್ಳಿ, ಹೊನ್ನಾವರ, ಕಾಂಚಿ, ಕಾಸರ್ಗೋಡು, ಮಧುರೆ, ಮನ್ನಾರ್ಗುಡಿ ತಿರುಗಿದೇನೆ. ಆದರೆ, ದಿಟ ಹೇಳುತ್ತೇನೆ, ನಂಬಿದರೆ ನಂಬಿ ಬಿಟ್ಟರೆ ಬಿಡಿ, ಮುಖಸ್ತುತಿ ಅಂತ ತಿಳಿದುಕೊಳ್ಳಬೇಡಿ, ತಮ್ಮಷ್ಟು ಅವರು ಯಾರೂ ...ಬೆವತಿಲ್ಲ!” ಅಂದರಂತೆ.

೩

ಬುಲ್‌ಬುಲ್‌ತರಂಗ್ ವಿದ್ವಾಂಸರೊಬ್ಬರಿಗೆ ಎಂತಹುದೋ ಒಂದು ಜ್ವರ. ಆಸ್ಪತ್ರೆಗೆ ಸಾಗಿಸಿದರು. ಡಾಕ್ಟರುಗಳು ತಾವು ಕಲಿತ ವಿದ್ಯೆ ಯನ್ನೆಲ್ಲಾ ಖರ್ಚು ಮಾಡಿದರು. ವಿಷಮಸ್ಥಿತಿಗೆ ಬಂತು. ಆಗ, ಯಾರೋ ಪುಣ್ಯಾತ್ಮರು ರೋಗಿಯ ಹಾಸಿಗೆ ಬಳಿಗೆ ಯಾರನ್ನಾದರೂ ಕರಿಸಿ ಕಿಂಚಿತ್ ಬುಲ್‌ಬುಲ್‌ತರಂಗ್ ನುಡಿಸಿದರೆ, ಗುಣಮುಖವಾಗಬಹುದೆಂದು ಸೂಚನೆ ಕೊಟ್ಟರು. ಹಾಗೆಯೇ ಮಾಡಿದರು. ವಿದ್ವಾಂಸರು ಉಳಿದುಕೊಂಡರು....

ಆದರೆ, ಸುತ್ತಮುತ್ತಲಿನ ಹಾಸಿಗೆಗಳಲ್ಲಿ ಮಲಗಿದ್ದವರೆಲ್ಲರೂ ಪರಂಧಾಮ ವನ್ನೈದುಬಿಟ್ಟಿದ್ದರು !

೪

ಗಾನವಿದ್ಯಾಚತುರರು ಎರಡು ಗಂಟೆಗಳ ಕಾಲ ಅಖಂಡವಾಗಿ ಕಛೇರಿ ನಡೆಸಿ, ಅನಂತರ, ನಸುನಗುತ್ತಾ, "ಸಭಿಕರಲ್ಲಿ ಯಾರಿಗಾದರೂ ಯಾವು ದಾದರೂ ಹಾಡನ್ನು ಕೇಳಬೇಕೆಂಬ ಇಚ್ಛೆ ಇದ್ದರೆ, ಅಗತ್ಯವಾಗಿ ಹಾಡು ತ್ತೇನೆ" ಎಂದು ವಿನಯಪೂರ್ವಕವಾಗಿ ಕೇಳಿಕೊಂಡರೆ, ಇದೀಗ ಸಮಯ ಅಂತ, ಎಲ್ಲರೂ ಏಕಕಂಠದಿಂದ "ಮಂಗಳ ಹಾಡಿ!" ಅಂತ ಕೂಗಿ ಬಿಡೋದೇ ? ಏನನ್ಯಾಯ ?

೫

ಒಬ್ಬ : "ಹಾರ್ಮೋನಿಯಂ ನುಡಿಸುವವರಿಗೆ ಕ್ಷಯರೋಗ ತಗಲು ವುದಿಲ್ಲ ಅಂತ ಅಮೇರಿಕಾ ದೇಶದ ಒಬ್ಬರು ಡಾಕ್ಟರು ಹೇಳಿದಾರೆ."

ಮತ್ತೊಬ್ಬ : "ಇರಬಹುದು. ಆದರೂ, ನೆರೆಮನೆಯಲ್ಲಿ ವಾಸವಾಗಿ, ಹಾರ್ಮೋನಿಯಂ ಬಾರಿಸುತ್ತಿರುವ ಮಹಾ ಪ್ರಾಣಿಗೆ ದೇವರು ಇನ್ನು ಯಾವು ದಾದರೂ ಒಂದು ಶಿಕ್ಷೆಯನ್ನು ಕೊಟ್ಟೇಕೊಡುತ್ತಾನೆ, ಖಂಡಿತ."

೬

ಮ್ಯೂಸಿಯಂ ಅಧಿಕಾರಿ : "ಇದುವರೆಗೂ ತಯಾರಾಗಿರುವ ಗ್ರಾಮ ಫೋನ್ ರಿಕಾರ್ಡುಗಳೆಲ್ಲವನ್ನೂ ಸಂಗ್ರಹಿಸಿ ಇಲ್ಲಿ ಇರಿಸಬೇಕೆಂಬ ಸಲಹೆ ಬಂದಿದೆಯೆಲ್ರಿ ?"

ಗುಮಾಸ್ತೆ : "ನ್ಯಾಯ. ನಮ್ಮ ಕಾಲದಲ್ಲಿ ನಾವು ಯಾವ ಯಾವ ಕಷ್ಟಗಳನ್ನು ಸಹಿಸುತ್ತಿದ್ದೆವು ಎಂಬುದನ್ನು ನಮ್ಮ ಮಕ್ಕಳೂ ಮೊಮ್ಮಕ್ಕಳೂ ತಿಳಿಯಬೇಕಾದದ್ದೆ, ಸ್ವಾಮಿ !"

---

# ಪರೀಕ್ಷೆ — ಸಿನಿಮಾ

ನಾನೂ ಗೋಪುವೂ ನಮ್ಮ ಪಾಡಿಗೆ ನಾವು ಎಲ್ಲೋ ಹೋಗುತ್ತಿದ್ದರೆ, ತಮ್ಮ ಮನೆ ಜಗುಲಿ ಮೇಲೆ ನಿಂತಿದ್ದ ಮೇಷ್ಟರು ನಮ್ಮನ್ನು ನೋಡೇಬಿಟ್ಟರು. "ಏನ್ರಯ್ಯಾ, ಎಲ್ಲಿಗೆ ಸವಾರಿ ?" ಅಂತ ಕೇಳೇಬಿಟ್ಟರು. "ಬನ್ರಪ್ಪಾ, ಒಳಗೆ" ಅಂತ ಹೇಳೇಬಿಟ್ಟರು !.... ಸರಿ, ಒಳಗೆ ಹೋದೆವು. ತಮ್ಮ ಕೊಠಡಿ ಯಲ್ಲಿ ನಮ್ಮಿಬ್ಬರನ್ನು ನಿಲ್ಲಿಸಿ, ಇನ್ನೆರಡು ಆಸನಗಳನ್ನು ತರುತ್ತೇನೆಂದು ಅವರು ನಡುಮನೆಗೆ ಹೋದರು. ಆಗ, ಗೋಪು, "ಲೋ ! ಮೇಷ್ಟರ ಬಾಯಿಂದ ಇವತ್ತು ಹೇಗಾದರೂ ಮಾಡಿ, 'ಸಿನಿಮಾ' ಅಂತ ಹೊರಡಿಸು ತ್ತೇನೆ. ಕಾಫಿ ಕೊಡಿಸುತ್ತೀಯೋ ಇಂದ್ರಭವನದಲ್ಲಿ ?" ಅಂದ. "ಆಗಲಿ ! ಆದರೆ, 'ಸಿನಿಮಾ' ಅಂತ ಹೇಳುವುದಕ್ಕೆ ಮೊದಲೇ ಮೇಷ್ಟರ ಕೈಲಿ 'ಪರೀಕ್ಷೆ' ಅಂತ ನಾನು ಹೇಳಿಸಿದರೆ ?" "ಆಗ, ನಾನು ನಿನಗೆ ಕೊಡಿಸು ತ್ತೇನೆ, ಸರಿಯೋ ?" ಅಂತ ಗೋಪು ಒಪ್ಪುವುದರೊಳಗೆ ಮೇಷ್ಟರೂ, ಎರಡು ಕುರ್ಚಿಗಳೂ ಬಂದುವು. ನಾವು ಕುಳಿತು, ಸಿದ್ಧರಾದೆವು. ಮೇಷ್ಟರೂ ಕೂಡ—ಪಾಪ—ಕುಳಿತುಕೊಂಡರು.

ಗೋಪು : ಎಂ. ಜಿ. ಎಸ್. ಟೂರ್ನಮೆಂಟುಗಳು ಯಾವಾಗ ಸಾರ್, ಈ ವರ್ಷ ?

ಮೇಷ್ಟರು : ಸರಿ, ಬಿಡಿ ! ಯಾವಾಗಲೂ ಇದೇ ಯೋಚನೆಯೇ ನಿಮಗೆ ? ನಿದ್ದೆಗಿದ್ದೆ ಬರುವುದಿಲ್ಲವೇನೋ, ನೆಟ್ಟಗೆ ? ಮೂರು ಹೊತ್ತೂ, ಕ್ರಿಕೆಟ್ಟು, ಸಿ.... ...

ನಾನು : (ಥಟಕ್ಕನೆ) ಹೌದು, ಸಾರ್ ! ನಿಮ್ಮ ಪಾಠಗಳು ಈ ವರ್ಷ ಪೂರಾ ತಪ್ಪಿಹೋಗಿದೆ ಸಾರ್ ! ಬುಧವಾರ, ಅಂದರೆ ರಜಾ ! ಶನಿವಾರ, ಭಾನುವಾರ, ಆದರೂ ಕ್ಲಾಸು ತೆಗೆದುಕೊಂಡು ಪಾಠ ಮುಗಿಸಬೇಡವೆ, ಸಾರ್ ?

ಮೇಷ್ಟರು : ಅದರಿಂದೇನು, ವೆಂಕಟಾಚಲ ? ಇನ್ನು ನಾಲ್ಕು ತಿಂಗಳಿವೆಯಲ್ಲಾ ವರ್ಷದ ಕೊನೆಗೆ ? (ಅಯ್ಯೋ ! ಪರೀಕ್ಷೆಗೆ ಅಂತ ಹೇಳಬಾರದಾಗಿತ್ತೆ ?) ಹೇಗಾದರೂ ಮಾಡಿ ಆಯಿತು ಅಂತ ಅನ್ನಿಸಿಬಿಡುತ್ತೇನೆ. ಯಾಕಪ್ಪಾ ನಿಮಗೆ ಇಷ್ಟೊಂದು ಗಾಬರಿ, ಎಂದೂ ಕಾಣದೆ ಇದ್ದವರ ಹಾಗೆ ? ಇದೇನು ಮೊದಲನೆಯ ಸಲವೇ........

ಗೋಪು : ಇಲ್ಲ, ಸಾರ್ ! ಇಲ್ಲ, ಸಾರ್ ! ಸುಮ್ಮನೆ ನಿಮ್ಮೆದುರಿಗೆ ಆಡಿಕೊಳ್ಳುವುದು ಅಷ್ಟೆ ! ಹುಡುಗರೆಲ್ಲರೂ ಖುಷಿ ಮೇಲಿದಾರೆ, ಸಾರ್, ಬರೀ ಬೂಟಾಟಿಕೆ, ಇವೆಲ್ಲಾ. ಜನವರಿ, ಫೆಬ್ರವರಿ ತಿಂಗಳಲ್ಲೂ ಕೂಡ ಸಾಯಂಕಾಲವಾದರೆ .......

ಮೇಷ್ಟರು : ಗೊತ್ತಪ್ಪಾ, ಗೋಪು, ನನಗೆ ಗೊತ್ತಿಲ್ಲವೆ. ಸಿ (ಸೋತೆ!) ಸ್ಟೆಮಾಟಿಕ್ಕಾಗಿ (ಗೆದ್ದೆ) ಓದುವುದೇ ಇಲ್ಲ.

ನಾನು : ಅದಿರಲಿ, ಸಾರ್ ! ಮೊದಲಿಂದ ನೀವು ಕ್ಲಾಸಿನಲ್ಲಿ ಒಂದೇ ಸಮನಾಗಿ ಹೇಳುತ್ತಾ ಇದ್ದುದನ್ನೆಲ್ಲಾ ಬರೆದುಕೊಂಡು ಗಟ್ಟಿಮಾಡಿಕೊಂಡರೆ ಸಾಲದೆ, ಸಾರ್ ? (ಮೇಷ್ಟರು ಯಾಕೋ ಸುಮ್ಮನಿರುವುದನ್ನು ನೋಡಿ) ಅಥವಾ, ಡಿಸೆಂಬರಾಚೆ........

ಗೋಪು : (ಥಟಕ್ಕನೆ, ಎಚ್ಚೆತ್ತು) ಡಿಸೆಂಬರಾಚೆ, ಒಟ್ಟಿಗೆ ಎಲ್ಲಾನೂ ತಲೆಗೆ ತುಂಬಿಸಿಕೊಂಡರೆ, ಹುಚ್ಚು ಹಿಡಿಯುವುದಿಲ್ಲವೆ, ಸಾರ್ ! ಆಗಾಗ್ಗೆ....

ಮೇಷ್ಟರು : (ಬಲೆಗೆ ಬೀಳುತ್ತಾ) ಏನಯ್ಯಾ ನೀನು ಹೇಳುವುದು ? ಆಗಾಗ್ಗೆ ಸಿ (ಸತ್ತೆ) ಪ್ ಮಾಡುತ್ತಾ (ಬದುಕಿದೆ) ಇರಬೇಕೋ ಕಾಫೀನಾ ? ಆಗಾಗ್ಗೆ, ಹೋಗುತ್ತಾ ಇರಬೇಕೋ (ಕೆಟ್ಟೆ, ಅಯ್ಯೋ, ಕೆಟ್ಟೆ !)

ನಾನು : ಹಾಗಲ್ಲ ಸಾರ್, ಇಲ್ಲಿ ನೋಡಿ ಸಾರ್, ಇಲ್ಲಿ ! ನಾನು ಹೇಳುವುದನ್ನು ಕೇಳಿ ಸಾರ್ ! ಅಷ್ಟೊಂದು ವಿಷಯಗಳನ್ನೂ ನಮ್ಮ ಈ ಚಿಕ್ಕ ಚಿಕ್ಕ ಬುರುಡೆಗಳಿಗೆ ತುಂಬಿಕೊಳ್ಳುವುದು ಸಾಧ್ಯವೆ, ಸಾರ್, ಬಯಾಲಜಿ ಏನು ಹೇಳುತ್ತದೆ, ಸಾರ್, ಈ ವಿಷಯವಾಗಿ.

ಮೇಷ್ಟ್ರು : ಪ (ಅಬ್ಬಬ್ಬ, ಕಡೆಗೂ ಗೆದ್ದೆ) ರದಾಡಬೇಡಿರೋ! (ಇಷ್ಟೇನೇ) ಪ(ಈಗಲಾದರೂ) ರ್ಜಕುಲರಾಗಿ ಅಲ್ಲಲ್ಲಿ ನೋಡಿಕೊಳ್ಳಿ ಸಾಕು. ಅಂಥಾ ಪ (?) ಜೀತಿ (ಥೂ) ಏನೂ ಇಲ್ಲಪ್ಪಾ !

ಗೋಪು : ಕೊಂಚ ಆಯಾಸ ಪರಿಹಾರವೂ ಬೇಕು, ಸಾರ್.

ಮೇಷ್ಟ್ರು : (ಪಾಪ ! ಅವನ ಕುತಂತ್ರವನ್ನು ತಿಳಿಯದೆ) ಬೇಕಪ್ಪಾ, ಬೇಕು ! ಬೇಡ ಅಂದವರು ಯಾರು ? ವಾರಕ್ಕೊಂದು ಸಲ........

ನಾನು : (ಹಠಾತ್ತಾಗಿ, ಎದ್ದು, ಅವರೆದುರಿಗೆ ಹೋಗಿ ನಿಂತು, ಕೈಗಳನ್ನು ಬೀಸುತ್ತಾ) ಕೂಡದು, ಸಾರ್, ಕೂಡದು, ಕೂಡಲೇ ಕೂಡದು !

ಮೇಷ್ಟ್ರು : ಯಾಕೋ, ಹೀಗೆ ಕೂಗಿಕೊಳ್ಳುತ್ತೀಯಾ ? ಸುಧಾರಿಸಿಕೊಳ್ಳೋ ! .......

(ಅಷ್ಟು ಹೊತ್ತಿಗೆ ಯಾರೋ ಹೊರಗಡೆ ಓಲ್ಡ್ ಹಾರ್ಸ್ ! ಓಲ್ಡ್ ಹಾರ್ಸ್ ! ಎಂದು ಕೂಗಿದರು !)

ಮೇಷ್ಟ್ರು : ಸರಿ ! ಇನ್ನು ನೀವು ಹೊರಡಿ ! ನಾನೂ ಹೋಗಬೇಕು.

ಗೋಪು : (ಕಡೆಯದಾಗಿ — ಒಂದು ಗಾಳ ಹಾಕುತ್ತಾ) ಎಲ್ಲಿಗೆ ? ಸಾರ್ !

ಮೇಷ್ಟ್ರು : ಸಿ (ದೇವರೇ) ನಿಮಾಕ್ಕೆ ! (ಶಾಂತಂ ಪಾಪಂ !)



# ಸಾಹಿತ್ಯೋಪಾಸಕರಿಗೆ ಕೆಲವು ಸಲಹೆಗಳು

---

## ೩. ವಿಮರ್ಶೆ

ವಿಮರ್ಶಕನೇ ಸಾಹಿತ್ಯಾಭಿವೃದ್ಧಿಯ ಜೀವ: ಜೀವಾಳ. ಅವನಿಗಾಗಿಯೇ ಸಾಹಿತ್ಯ ಬೆಳೆಯುತ್ತಿರುವುದು. ಅವನೇ ಅದನ್ನು ಅಳೆದು ಅಳಿಸುತ್ತಿರುವವನು. ಅಂದಮೇಲೆ ಪ್ರಸಿದ್ಧ ವಿಮರ್ಶಕನಾಗಬೇಕೆಂಬ ಆಸೆಯು ಪ್ರತಿಯೊಬ್ಬ ಯುವಕನನ್ನೂ ಆವರಿಸಿರುವುದರಲ್ಲಿ ಏನೂ ಆಶ್ಚರ್ಯವಿಲ್ಲ. ಆದರೆ ವಿಮರ್ಶಕನು ಏಳು ಅಂಶಗಳನ್ನು ನೆನಪಿನಲ್ಲಿಡಬೇಕು. ಅವುಗಳಿಗೆ ಗಮನ ಕೊಟ್ಟರೆ, ಗ್ರಂಥಕ್ಕೆ ಗಮನ ಕೊಡಬೇಕಾಗಿಲ್ಲ.

(೧) ಗ್ರಂಥಕರ್ತನ ಹೆಸರು, ಕುಲ, ಕಾಲ (ಅನೇಕ ವೇಳೆ ವಿಮರ್ಶಕನ ದೃಷ್ಟಿಕೋಣವನ್ನೇ ಈ ವಿಷಯಗಳು ಬದಲಾಯಿಸಿಬಿಡುತ್ತವೆ.)

(೧) ಗ್ರಂಥಕರ್ತನ ವಿಳಾಸ (ವಿಮರ್ಶೆಯನ್ನು ಪ್ರಕಟಿಸಿದ ಕೂಡಲೇ ರಿಜಿಸ್ಟರ್ ನೋಟೀಸ್ ಬರುವುದರಿಂದ ಈ ವಿಷಯವನ್ನು ಆಮೇಲೆ ತಿಳಿದುಕೊಳ್ಳಬಹುದಾದರೂ, ಮೊದಲೇ ಪತ್ತೆ ನಡೆಸಿದರೆ, ಆ ಪ್ರಾಂತ್ಯದ ಶೈಲಿ, ಅದರ ಕ್ಲಿಷ್ಟತೆ, ಇವುಗಳನ್ನು ಕುರಿತು ನಾಲ್ಕೈದು ವಾಕ್ಯಗಳನ್ನಾದರೂ ಬರೆದುಬಿಡಬಹುದು.)

(೩) ಮುನ್ನುಡಿ (ಪ್ರಸಿದ್ಧ "ಮುನ್ನುಡಿ ಬರಹಗಾರರು" ಯಾರಾದರೂ ಮುನ್ನುಡಿ ಬರೆದುಬಿಟ್ಟಿದ್ದರೆ, ಇಡೀ ವಿಮರ್ಶೆಯನ್ನು, ಮುನ್ನುಡಿಯಿಂದ ಕೆಲವು ವಾಕ್ಯಗಳನ್ನುದ್ಧರಿಸುವುದರಿಂದಲೇ ಪೂರೈಸಿಬಿಡಬಹುದು.)

(೪) ಭಾಷಾಂತರವೋ, ಸ್ವತಂತ್ರ ಗ್ರಂಥವೋ? (ಭಾಷಾಂತರ ಗ್ರಂಥವಾದರೆ, ಭಾಷಾಂತರಗಳ ಕೆಲವು ಸಾಮಾನ್ಯ ಗುಣಗಳನ್ನು ಕುರಿತೂ ಅವುಗಳಿಗೆ ಸಹಜವಾದ ಕೆಲವು ದೋಷ ಲೋಪಗಳನ್ನು ಕುರಿತೂ, ನಿರಾಯಾಸವಾಗಿ ನಾಲ್ಕೈದು ಪುಟಗಳಷ್ಟು ಬರೆದುಬಿಡಬಹುದು. ಸ್ವತಂತ್ರ

ಗ್ರಂಥವಾದರೆ, "ಕನ್ನಡದಲ್ಲಿ ಸ್ವತಂತ್ರ ಗ್ರಂಥಗಳು ಅತಿ ವಿರಳ. ಸಂಸ್ಕೃತ, ಇಂಗ್ಲೀಷು ಈ ಸಾಹಿತ್ಯಗಳನ್ನು ಆಶ್ರಯಿಸಿಕೊಂಡು ನಾವು ಬದುಕಿಬಾಳಿ".... ಇತ್ಯಾದಿ ಪ್ರಾರಂಭಿಸಬಹುದು.)

(೫) ಗ್ರಂಥವು ಗ್ರಂಥಕರ್ತನ ಪ್ರಥಮ ಅಪರಾಧವೋ? (ಹಾಗಿದ್ದರೆ, "ಈ ಗ್ರಂಥದಲ್ಲಿ ಕಂಡುಬರುವ ಹಲಕೆಲವು ದೋಷಗಳು, ಗ್ರಂಥಕರ್ತನ ಸ್ಫೂರ್ತಿಯೂ ಅನುಭವವೂ ಬಲಪಡುತ್ತಾ ಬಂದಾಗ, ಮಾಯವಾಗುವುವು ಎಂಬ ಭರವಸೆ ನಮಗಿದೆ" ಎಂದು ಸುಲಭವಾಗಿ, ಗ್ರಂಥವನ್ನು ಓದದೆ, ನಾವು ಹೇಳಬಹುದು. ಪ್ರಥಮ ಗ್ರಂಥವಲ್ಲದಿದ್ದರೆ, "ಕನ್ನಡ ಮಾತೆಯ ಚರಣಾರವಿಂದದಲ್ಲಿ ಈಗಾಗಲೇ ಅನೇಕ ಕುಸುಮಮಾಲೆಗಳನ್ನರ್ಪಿಸಿ ಓದು ಗರಿಗೆ ಚಿರಪರಿಚಿತನಾಗಿರುವ".......ಇತ್ಯಾದಿ ಹೇಳಿ, ಕಡೆಗೆ "ಇದೇ ರೀತಿ ಯಾಗಿ ಶ್ರೀಮಾನ್.......ರವರು ನಾಡ, ನುಡಿಯ ಸೇವೆ ಮಾಡುತ್ತಾ......." ಎಂದು ವಿಮರ್ಶೆಯನ್ನು ಕೊನೆಗಾಣಿಸಬಹುದು.)

(೬) ಯಾವ ವಿಮರ್ಶೆಯಲ್ಲಿಯೂ ಕಡೆಯ ಪ್ಯಾರಾ ಮಾತ್ರ 'ಒಟ್ಟಿನಲ್ಲಿ' ಎಂಬ ಪದದಿಂದಲೇ ಪ್ರಾರಂಭವಾಗಬೇಕು. ಇದು ಬಹಳ ಮುಖ್ಯವಾದದ್ದು. ಉದಾಹರಣೆಗೆ "ಒಟ್ಟಿನಲ್ಲಿ, ಗ್ರಂಥಕರ್ತನು ತನ್ನ ಭಾಗದ ಕೆಲಸವನ್ನು ಇದ್ದ ಬುದ್ಧಿಶಕ್ತಿ ಎಲ್ಲವನ್ನೂ ಉಪಯೋಗಿಸಿ ಪೂರೈಸಿರುವುದು ಸ್ತುತ್ಯರ್ಹವಾಗಿದೆ." "ಒಟ್ಟಿನಲ್ಲಿ, ಈ ಗ್ರಂಥವನ್ನು ಭಾಷಾಭಿಮಾನಿಗಳೆಲ್ಲರೂ ಕೊಂಡುಕೊಂಡು, ತಮ್ಮ ಪುಸ್ತಕದ ಬೀರುವಿಗೆ ಸೇರಿಸಿಬಿಡಬೇಕೆಂದು ಹೇಳಿ ಈ ವಿಮರ್ಶೆಯನ್ನು ಮುಗಿಸುವೆವು." "ಒಟ್ಟಿನಲ್ಲಿ, ಪ್ರತಿಭಾಶಕ್ತಿಯ ಸೆರಳು ಸುಳಿದಾಡುತ್ತದೆ; ಶೈಲಿಯೂ ಒಂದು ವಿಧವಾದ ವೈಶಿಷ್ಟ್ಯವನ್ನು ಹೊಂದಿದೆ. ವಾಚಕನಿಗೆ ಒಂದೊಂದು ಸಾರಿ ಭಾವೋದ್ರೇಕವಾಗಿ, ಗ್ರಂಥದ ವಿಷಯದಮೇಲೂ, ಅದರ ಕಾರಣಕರ್ತರಮೇಲೂ, ಉಗ್ರವಾದ ಕೋಪದಿಂದ ಮನಸ್ಸು ಕುದಿಯುತ್ತವೆ; ಕೊಲೆ ಅಥವಾ ಆತ್ಮಹತ್ಯೆಯ ಯೋಚನೆಯೂ ಕೂಡ ಹೊರಹೊಮ್ಮುತ್ತದೆ" ಎಂಬಿವೇ ಮುಂತಾದ ವಿಮರ್ಶೆಗಳನ್ನು ನೋಡಿ. ಅಂತು "ಒಟ್ಟಿನಲ್ಲಿ" ಎಂದು ಇದ್ದೇ ಇರಬೇಕು.

---

*

# ಆಟ ಓಟದ ದೇವಾ

———

೧

[ಫುಟ್ ಬಾಲ್] ಕಾಯದ ನೋವಿಗಂಜಿ, ಗಾಯದ ತಾಪಕಂಜಿ, ಹಿಂಜರಿಯದೆ, ಮುಂದುವರಿದು, ಉರಿಬರಲಿ, ಸಿರಿಬರಲಿ, ನನ್ನ ಕಾಲೇಜಿಗಾಗೆಂದು, ಕೌಶಿಕನ ಕುದುರೆಯಂತೆ, ಕಾಲಬೀಸಿ, ತುಂಬುಗಾಳಿಯ ಗೋಳಮಂ, ಹೊಡೆ ದೊಡೆ, ಗೆಲುಸಿದ್ಧ, ಗೆಲುಸಿದ್ಧ, ಬೆಳಗುವ ಬಟ್ಟಲೂ, ತೊಳಗುವ ಗುರಾಣಿಯೂ, ಸಿದ್ಧ, ನಿಮ್ಮಾಣೆ, ಮಾತು ಕೊಟ್ಟನು, ನಮ್ಮ ಆಟ ಓಟದ ದೇವ.

೨

[ಕ್ರಿಕೆಟ್ಟು] ಎಲವೋ, ಎಲವೋ, ಕಂಠಪೂರ್ತಿ ತಿಂಡಿ ತಿಂದು, ಶುಂಠಿ ಪೆಪ್ಪರ್ಮಿಂಟ ಮೆದ್ದು, ಬಾರೋ, ಬಾರೋ! ಬಿಸಿಲ ಬಯಲಂಚಿನಲಿ ಕುಳಿತು, ಕೂಗೋ, ಕೂಗೋ, ನಿಮ್ಮವರು ಲಟಲಟನೆ ಆರಾರು ಬಿಗಿಯಲೆಂದು, ನಿಮ್ಮರಿ ಗಳೇಕಾದಶರಿಗೇಕಾದಶಿ ಆಗಲೆಂದು; ಕೇಳಲಿ, ನಮ್ಮ ಆಟ ಓಟದ ದೇವ.

೩

[ಕ್ರಿಕೆಟ್ಟು] ಹುಲ್ಲ ಮೆದೆಯಲಿದ್ದ ನಾಯಿ ಹಸಿದ ಹಸುವನೋಡಿ ಸಿತು, ಬೊಗುಳಿ ಬೊಗುಳಿ. ತಾವು ತಿನ್ನರು, ತಿಂಬರಿಗೆ ತಿನ್ನಲೀಯರು, ತೆಗಳಿ, ತೆಗಳಿ. ಮಾಡರು, ಮಾಡಿಸರು; ಆಡರು, ಆಡಿಸರು, ಅಕಟ ಅಕಟ, ಬಯಲ ಸೆರಗಿ ನಲ್ಲೊರಗಿ ಗಡಿಬಿಡಿಯ ಮಾಳ್ಪರು. ಆಡುವ ಚೆಂಡಿ ಗರನು, ಹೊಡೆವ ದಾಂಡಿಗರನು, ಅತ್ತಲಿತ್ತ ಓಡಿಯಾಡಿ ತಡೆವ ಹುಡುಗರನು, ಕೂಗಿ ಕೆಡಹುವರು. ಬಾರಿಬಾರಿ

ಬೀರುವ ವೀರರಂ ಕಂಡು, ಕಣ್ಣು ಕೆಂಪಾಗಿ, ರೇಗಿ ಮೊಡೆ, ನರಕದಲ್ಲಿಕ್ಕುವನು, ನಮ್ಮ ಆಟ ಓಟದ ದೇಹ.

೪

[ಟೆನ್ನಿಸ್] ಬ್ಯಾಟ ಹಿಡಿದು, ಕೋರ್ಟಿಗಿಳಿದು, ಸೇವೆಗೆಯ್ದ ಚೆಂಡ ಕಂಡು, ಬೆದರಿ ಸರಿದು, ಪ್ರೀತಿ, ಪ್ರೇಮ, ಸಾಕು ನನಗೆ; ಸೆಟ್ಟು ನಿಮಗೇ ಇರಲೆಂಬೊರಲಿದರೆ, ಯಾರೇನು ಮಾಡುವರು? ಆ ನೆ ಯ ಮಾವುತನೆಂದು ನಿಂತು, ಬಾಲವೇ ಸೊಂಡಲೆಂದರೆ, ಯಾರೇನು ಮಾಡುವರು? ಅರಿದರಿದು ಗೆಲುವ ನಿರಿದಿರಿದು ಹೋಗೆಂದೊಡೆ, ಸೋಲ ಸರಿಸರಿದು ಬಾ ಎಂದೊಡೆ, ತಥಾಸ್ತು, ಎಂಬನು ನಮ್ಮ ಆಟ ಓಟದ ದೇವ.

೫

[ಕ್ರಿಕೆಟ್] ಕಾಸಿಗೆ ಬಂದಾತನಲ್ಲ; ದೋಸೆಗೆ ಬಂದಾತನಲ್ಲ, ಮೊಡಲಾಸೆ, ಕಪ್ಪಾಸೆ, ಜಂಬಗಿಂಬಗಳಿಲ್ಲ. ನ ನ್ನ ಕಾಲೇಜ ಕೀರ್ತಿಯ ಬೆಳಗ ಬಂದೆನಯ್ಯಾ, ನನ್ನ ಟೀಮಿನ ಶೀವಿಯ ಬೆಳಗ ಬಂದೆನಯ್ಯಾ. ಗೆಳೆಯರ ಕೂಡ ನಕ್ಕು, ನಗಿಸಿ, ತಿಂದು ಕರಗಿಸಿ, ಚೆಂಡನೊದ್ದು ವಾಂಡ ಬೀಸಿ, ಓಲೈಸ ಬಂದೆನಯ್ಯಾ; ಬೇರೆ ಹಬ್ಬವ ಮುಂಟೆ? ಆಟ ಓಟದ ದೇವ!

೬

[ಫುಟ್ ಬಾಲ್] ಪಾದದಿಂದಲೊಗೆದ ಗೋಳ ಅತ್ತಲಿತ್ತ ಸುಳಿಯದಂತೆ ನೆಟ್ಟಗಾ ಗೋಲಿಗೇ ನುಗ್ಗುವಂತೆ, ಅವರ ಕಣ್ಣು ಕುಕ್ಕು ವಂತೆ, ವರವನಿಕ್ಕುವನು, ತಂದೆ. ಎತ್ತಲೊ ಸರಿಯ ದಂತೆ, ಅತ್ತಲವರು ತಡೆಯದಂತೆ, ಮತ್ತೆ ಮತ್ತೆ ಚಿತ್ತೈ

ಸುವನು, ತಂದೆ. ಭಾಪು, ಭೂಪ, ಎಂದೆನ್ನ ಬೆನ್ನ
ಮೇಲೆ ಗುದ್ದುವನು, ಆಟ ಓಟದ ದೇವ !

೭

[ಒಟ್ಟು] ಎಲವೋ ! ಮಾತು ಮುಗಿದರೆ ಮತ್ತೆ ಬಾಯಿಬಿಡ
ಬಾರದಯ್ಯಾ ! ಮೂರು ಬಾರಿ ಕೂತು ಸೋತು, ಭೇಸ್ತು
ತಿಂದು ತೇಗು ಬಂದು, ಮತ್ತೆ ಕಟ್ಟಬಾರದಯ್ಯಾ ! ಅತ್ತೆ
ಮುನಿವರೆ ಮಾವನ ಮನೆಯೊಳಗಿರಬಾರದಯ್ಯಾ !
ಅಂಪೈರು ತೊಲಗೆಂದರೆ, ಹಲ್ಲುಕಿರಿದು ನಿಲಬಾರದಯ್ಯಾ!
ನಿಂತಿರಾದರೆ, ಅಲ್ಲಿ, ಕುಂತಿರಾದರೆ, ನಿಮ್ಮಾಣೆ, ನಿಮ್ಮ
ಕಾಲೇಜಿನಾಣೆ, ತಲೆದಂಡ, ತಲೆದಂಡ, ಇಕ್ಕಿದ
ಪಿಂಡವೇ ದಂಡ, ಹೇಳಿದನು ನಮ್ಮ ಆಟ ಓಟದ ದೇವ.



# ಬಾಯಿಗೆ ಬೀಗ

ಪ್ರತಿಯೊಬ್ಬನೂ ತನ್ನ ಮನಸ್ಸಿನ ಅಶಾಂತಿಗಾಗಿ ಯಾವುದಾದರೂ ಒಂದು ಗೋಳನ್ನು ಬಲವಾಗಿ ಹಿಡಿದಿರುತ್ತಾನೆ. ನನ್ನ ಸ್ನೇಹಿತ ಬಸವಯ್ಯನ ಗೋಳು ಏನು ಅಂದರೆ, ಹಿಟ್ಲರು ಮತ್ತು ಹಿಟ್ಲರನ ಮಣ್ಣಾಸೆ. ಆತನನ್ನು ಅವನು ಇಟ್ಲರು ಅನ್ನುತ್ತಾನೆ. ಇಟ್ಲರು ಅಂದರೆ ಬಸವಯ್ಯನಿಗೆ ಬೆಂಕಿ. ಈಚೆಗೆ ಬಸವಯ್ಯ ತನ್ನ ಗೋಳನ್ನು ನನ್ನ ಮುಂದೆ ಹೇಳಿಕೊಳ್ಳಲು ಪ್ರಾರಂಭಿಸಿದ್ದ. ಮೊನ್ನೆ ಐದು ದೀಪದ ಕಂಬದ ಹತ್ತಿರ ನನ್ನನ್ನು ಹಿಡಿದು ನಿಲ್ಲಿಸಿ, "ಇಲ್ಲಿ ನೋಡು, ರಾಮು, ಚೆಕೊಸ್ಲಾವಕರನ್ನು ಹಾಳಾದವನು ಎಲ್ಲಿ ಅಪ್ಪಳಿಸಿಬಿಡುತ್ತಾನೋ ಎಂಬುದೇ ನನಗೆ ಗಾಬರಿ!" ಎಂದು ಪೀಠಿಕೆ ಹಾಕಿದ. "ಅವನ ವಿಷಯ ಅಂದರೆ ನನಗೂ ಕೊಂಚ ಭಯವೇ" ಎಂದು ನಾನು ಕೊಟ್ಟ ಉತ್ತರದ ಸರಿಯಾದ ಅರ್ಥ ಬಸವಯ್ಯನಿಗೆ ತಿಳಿಯಲಿಲ್ಲ. "ಚೆಕೊಸ್ಲಾವಕಿಯಾ ರಾಷ್ಟ್ರವನ್ನು ಸೃಷ್ಟಿ ಮಾಡಿದ ಕ್ರಮದಲ್ಲೇ ಕೊಂಚ........" ಅಂದ. "ಕೊಂಚವೇನು ? ತುಂಬಾ........" ಅಂದೆ.

"ಹೌದು. ಆದರೂ........"

"ಇರಬಹುದು .......ಅಂತೂ...."

"ಅದನ್ನೇ ನಾನೂ ಹೇಳುವುದು" ಎಂದು ಮೊದಲುಮಾಡಿಕೊಂಡು, ಸುಮಾರು ನಲವತ್ತು ನಿಮಿಷಗಳ ಕಾಲ, ನನ್ನ ಅಂಗಿಯ ನಡುವಣ ಗುಂಡಿಯನ್ನು ಹಿಡಿದು ತಿರುವುತ್ತ, ಚೆಕೊಸ್ಲಾವಕಿಯಾದಲ್ಲಿರುವ ಒಡಕು ಬಿರುಕುಗಳು, ಇಟ್ಲರನ ತಂತ್ರ, ಹಂಗೇರಿಯರ ಕುತಂತ್ರ, ಡಾಲ್ಮೆಷಿಯಾದ ಕ್ರೋಯೇಷಿಯಾ, ಇವುಗಳನ್ನೆಲ್ಲಾ ಸವಿಸ್ತಾರವಾಗಿ ಸುಸ್ತಿಲ್ಲದೆ ವಿವರಿಸಿದ. ನಾನು ಅವನ ಕಡೆಗೆ ನನ್ನ ಕಿವಿಯನ್ನು ಮಾತ್ರ ತಿರುಗಿಸಿ ಹಿಡಿದಿದ್ದೆ; ಮನಸ್ಸು, ಅಂಗಡಿಯಿಂದ ತರಬೇಕೆಂದು ಅಮ್ಮ ಹೇಳಿದ್ದ ನಾಲ್ಕು ಪದಾರ್ಥಗಳಲ್ಲಿ, ಸಾಬೂನು – ಸಾಸುವೆ – ಸೀಸದ ಕಡ್ಡಿ, ಅಲ್ಲದೆ, ಉಳಿದದ್ದೇನು,

ಎಂದು ತಡಕಾಡುತ್ತಿತ್ತು...." ಒಟ್ಟಿನಲ್ಲಿ, ಮುಂಚುಕೋವಿಗೆ ಆದ ಗತಿಯೇ, ಅಣ್ಣ !" ಅಂತ ಬಸವಯ್ಯ ಹೇಳಿದಾಗ, ' ಇನ್ನೇನು, ಇವನ ಕಥೆ ಮುಗಿಯಿತು ' ಅಂತ ನಂಬಿ, ಮರ್ಯಾದೆಯಾಗಿ ಮಾರ್ಕಟ್ಟಿಗೆ ಹೋಗಿ ಬರೋಣ ಅಂತ, " ಸರಿ, ನ್ಯಾಯವಾದ ಮಾತು. ಸಂದೇಹವೇನಿದೆ !" ಎಂದು ಹೇಳಿದೆ ....... ಹೇಳಬಾರದಾಗಿತ್ತು.

" ನ್ಯಾಯವಾದ ಮಾತು ಅಂತ ನೀನು ಇಲ್ಲಿ ನಿಂತುಕೊಂಡು ತಲೆ ಅಲ್ಲಾಡಿಸುತ್ತಿರು. ಅಲ್ಲಿ ಆ ಮಹಾರಾಯ ಹೀರೋಹೂರಾ ಇದಾನಲ್ಲಾ, ಯೂರೋಪು ಹತ್ತಿರಲೇ !" ಅಂತ ನನ್ನ ಮೇಲೆ ರೇಗಿದ. ನಾನು ಮಾಡಿದ್ದು ಅಷ್ಟು ದೊಡ್ಡ ಅಪರಾಧ ಎಂದು ನನಗೆ ತಿಳಿಯಲಿಲ್ಲ. ಒಂದು ದೇಶಾವರದ ನಗೆಯನ್ನು ಬೀರುತ್ತಾ, " ಹ-ಹ !" ಎಂದೆ. ಬಸವಯ್ಯ " ಹಾ " ಅಂದ. ನಾನು ಕೊಂಚ ನಿಧಾನಿಸಿ, " ಓಹೋ " ಅಂದೆ. ಅದೇ ಸಮಯ ಕಾದಿದ್ದ ಬಸವಯ್ಯ ರಷ್ಯಾ, ಚೈನಾ, ಜರ್ಮ ಇವುಗಳ ಮನಃಕಷಾಯದ ವಿಚಾರವಾಗಿ ಮುಕ್ಕಾಲು ಗಂಟೆಯ ಕಾಲ ಮತ್ತೊಂದು ಉಪನ್ಯಾಸವನ್ನು ದಯಪಾಲಿಸಿದ. ಗುಂಡಿಯನ್ನು ಕತ್ತರಿಸಿಕೊಂಡು ಬಿಡಿಸಿಕೊಳ್ಳಲು ಧೈರ್ಯವೂ ಕತ್ತರಿಯೂ ಇಲ್ಲದೆ, ನಾನು . ಜನಮೇಜಯನಹಾಗೆ ಹೂಂಗುಟ್ಟುತ್ತಿದ್ದೆ.... ಅಂತು ಇಂತು, ನಾಸುವೆ ಸಾಬೂನು, ಇತ್ಯಾದಿಗೆ ಸೊನ್ನೆ.

ಆ ದಿವಸ ರಾತ್ರಿ ನನ್ನ ಕಣ್ಣಿಗೆ ನಿದ್ದೆ ಹತ್ತಲೇ ಇಲ್ಲ. " ಚೆಕೊಸ್ಲಾವಕಿಯಾ, ಬಸವಯ್ಯ ಇವರ ಕಷ್ಟಗಳಿಗೆ ನಾನು ಹೊಣೆಯೇ ? ನನ್ನನ್ನು ಯಾಕೆ ಈ ಶನಿಗಳು ಕಾಡಿಸಬೇಕು ? ಮನೆ ಹೊರಕ್ಕೆ ತಲೆ ಹಾಕಿದರೆ, ದಾರಿಗೆ, ಅಡ್ಡ ಬರುತ್ತಾನಲ್ಲಾ ... ಇಟ್ಲರಾದರೋ, ಬೇಗ ಬೇಗ ಬೇಕಾದ ಭೂಮಿಗಳನ್ನೆಲ್ಲಾ ಕಬಳಿಸಿಕೊಳ್ಳಬಾರದೇ ?.... ಬಸವಯ್ಯ ಹೀಗೆ ದಿನವೂ ಕೊರೆಯುತ್ತಾ ಬಂದರೆ, ನನ್ನ ಬುರುಡೆ ಗತಿ ಏನಾಗಬೇಕು ? ಇವನಿಂದ ತಪ್ಪಿಸಿಕೊಳ್ಳುವುದಕ್ಕೆ ಏನು ಉಪಾಯ ? ಪರಮಾತ್ಮಾ !" ಎಂದು ಯೋಚನೆ ಮಾಡುತ್ತಾ ಮಲಗಿದ್ದೆ.

ಪರಮಾತ್ಮ, ಕೇಳಬೇಕೆ, ಭಕ್ತಪರಾಧೀನನಲ್ಲವೇ ?.... ಕರುಣಿಸಿದ.

ಮರುದಿನ, ಧೈರ್ಯವಾಗಿ, ಎದೆ ಚಾಚಿಕೊಂಡು, ಹೊರಗೆ ಹೊರಟೆ. ಬಸ್ಸು ಬಂದು ನಿಲ್ಲುವ ಕಡೆ ಬಸವಯ್ಯ ಸಿದ್ಧ. "ಓದಿದೆಯಾ, ರಾಮೂ! ಚೆಕೊಸ್ಲಾವಕಿಯಾದಲ್ಲಿ ರ‍್ಸಿರ್ವ ಪ್ರಭು ..." ಎಂದು ಹೇಳುತ್ತಾ, ಅಂಗಿಯ ನಡುವಣ ಗುಂಡಿಯನ್ನು ಹಿಡಿದ. ಅವನು ಕಟ್ಟಿದ್ದ ಟೈಯನ್ನು ವಶಪಡಿಸಿಕೊಂಡು, ಮೆಲ್ಲಗೆ ಅದರ ಗಂಟನ್ನು ಸಡಿಲಿಸುತ್ತಾ, ನಾನು, "ಅದಿರಲಿ! ಅರಬಿಸ್ತೀನಲ್ಲಿ ಮಕ್‌ಮರ್ಹ ಪ್ರಭು ...?" ಎಂದೆ. ಬಸವಯ್ಯ ಒಂದು ನಿಮಿಷ ತಡವರಿಸಿದ. ಅರಬಿಸ್ತೀನು ಎಲ್ಲಿದೆ ಎಂದು ಅವನಿಗೆ ತಿಳಿಯದು ಅಂತ ಕಾಣುತ್ತೆ. ಅವನ ಮುಖದ ಬಲಗಡೆ ಮನಸ್ತಾಪ, ಎಡಗಡೆ ಆಶ್ಚರ್ಯ, ಮೂಗಿನ ತುದಿಯಲ್ಲಿ ಕೋಪ, ಹೀಗಾಗಿ ಆಸಾಮಿ ಕೆಂಚಗಾದ. ಯಾವುದನ್ನೋ ನುಂಗುತ್ತಾ, ಅವನು, "ಚೆಕ್ಕರಿದಾರಲ್ಲಾ........" ಅಂದ. ನಾನು, ಬೇಗನೆ, "ಯಹೂದರಹಾಗೆ" ಎಂದು ಅದಕ್ಕೆ ಪೂರ್ಣ ವಿರಾಮ ಹಾಕಿದೆ. "ಆದರೂ, ಚೆಕ್ ಜನಾಂಗದವರು ಇಟ್ಲರು ಬಂದ ಮೇಲೆ...." ಎಂದು ಬಸವಯ್ಯನು ಹೇಳಿ ಮುಗಿಸುವುದರೊಳಗೆ ನಾನು, "ಇಟ್ಲರೇನು? ಅವನ ತಾತ, ಓಬೀರಾಯನ ಕಾಲದಿಂದಲೂ, ಅಣ್ಣ!" ಅಂದೆ. ಬಸವಯ್ಯನು ಪೆಚ್ಚಾದನು. ಅವನ ಅವಸ್ಥೆಯನ್ನು ನೋಡಿ ನನಗೆ ಮನಕರಗಿತು. ಆದರೂ, ಎಡೆಗೆಡದೆ, ಅವನು, "ಡಾಕ್ಟರ್ ಬೀನೆಷ್...." ಎಂದು ಮತ್ತೆ ಚೆಕ್ಕರ ಮಾತನ್ನೆತ್ತಿದ. ನಾನು, "ಡಾಕ್ಟರ್ ವೀಸ್ಮ...." ಎಂದು ಯಹೂದರ ಸಮಾಚಾರ ಪ್ರಸ್ತಾಪಿಸಿದೆ. ತುರುಪ್ಪಿನ ಮೇಲೆ ತುರುಪ್ಪು, ಬೀಳುತ್ತಲೇ ಇತ್ತು.

ಕಡೆಗೆ, ಬಸವಯ್ಯ ನನ್ನ ಅಂಗಿ ಗುಂಡಿಯನ್ನು ಬಿಟ್ಟ. ನಾನು ಮಾತ್ರ ಅವನ ಟೈಯನ್ನು ಹಿಡಿದೇ ಇದ್ದೆ. ಅರಬಿಯರೂ ಯಹೂದರೂ ಒಂದಾಗಿ ಶಾಂತಸಾಗರದ ಕಡೆ ನುಗ್ಗಿದರೆ ಎಂತಹ ಕ್ರಾಂತಿ ಉಂಟಾಗಬಹುದು, ಅಬಿಸೀನಿಯಾ ಚಕ್ರವರ್ತಿ ಕ್ರೈಸ್ತನಲ್ಲವೇ, ಆದರೂ, ಸಹಾರಾ ಏಕೆ ಇನ್ನೂ ಮರಳು ತುಂಬಿದ ಬೆಂಗಾಡಾಗಿದೆ, ಭೂಪಟದಲ್ಲಿ ತೋರಿಸಿರುವ ಹಾಗೆ ನೈಲ್ ನದಿಯು ನಿಜವಾಗಿಯೂ ಕೆಳಗಿಂದ ಮೇಲಕ್ಕೆ ಹರಿಯುತ್ತಿದೆಯೋ, ಅದು ಸಾಧ್ಯವೇ, ಎಂಬಿವೇ ಮುಂತಾದ ಪ್ರಶ್ನೆಗಳನ್ನು ನಾನೇ

ಕೆರಳಿಸಿ, ಅವುಗಳಿಗೆ ಉಪನ್ಯಾಸ ರೂಪದಲ್ಲಿ ನಾನೇ ಉತ್ತರ ಹೇಳಿದೆ. ಕಡೆಗೆ ಬಸವಯ್ಯನ ಟೈಯನ್ನು ಬಿಟ್ಟೆ. 'ನಿಧಾನವಾಗಿ ಹೋಗಿ ಮನೆ ಸೇರು' ಎಂದು ಹೇಳಿ ಕಳುಹಿಸಿದೆ.

"ಉಷ್ಣಂ ಉಷ್ಣೇನ ಶಾಮ್ಯತಿ" ಅಂತ ನೀವು ಕೇಳಿರಬಹುದು. ನಿಜ, ಆ ಮಾತು. ಶಾಮ್ಯತಿ ... ...

ಈಗ, ಬಸವಯ್ಯ ಪರಂಗಿಯವರ ಪರದಾಟದಲ್ಲಿ ಬಿದ್ದು ಒದ್ದಾಡದೆ, ನೆಮ್ಮದಿಯಾಗಿ, ತನ್ನ ಮನೆ ಯೋಗಕ್ಷೇಮ, ತನ್ನ ಪರೀಕ್ಷೆ ಗಿರೀಕ್ಷೆ ಹವ್ಯಾಸಗಳು, ಇವುಗಳಲ್ಲೇ ನಿರತನಾಗಿ, 'ಸುಖ ಸಂಕಥಾ ವಿನೋದದಿಂ' ಮಹೀಶೂರ ನಗರದೊಳ್ ಮೆರೆಯುತಿರ್ಪನು.



# ಸಾಹಿತ್ಯೋಪಾಸಕರಿಗೆ ಕೆಲವು ಸಲಹೆಗಳು

## ೪. ಗ್ರಂಥ ಪ್ರಕಟಣೆ

(ಅ) ಈಗಿನ ಸನ್ನಿವೇಶದಲ್ಲಿ ಕನ್ನಡ ಗ್ರಂಥಗಳೆಲ್ಲವನ್ನೂ ಕರ್ಣಾಟಕ ಭಾಷೆಯಲ್ಲಿಯೇ, ಕಾಗದದಲ್ಲಿ ಅಚ್ಚು ಹಾಕಿ, ಜೋಡಿಸಿ, ಮಡಿಸಿ, ಹೊಲಿದು, ಮಾರಾಟಕ್ಕೋ ಅಥವಾ ಉಚಿತವಾದ ಗೌರವ ಹಂಚಿಕೆಗೋ ಸಿದ್ಧಮಾಡ ಬೇಕಾಗಿದೆ. ಗ್ರಂಥಕ್ಕೆ ರಟ್ಟಿದ್ದರೆ, ಅಷ್ಟು ಬೇಗನೆ ಒಳಗಿನ ಗುಟ್ಟು ರಟ್ಟಾಗುವುದಿಲ್ಲ. ರಟ್ಟಿನ ಮೇಲೆ ಬಣ್ಣದ ಒಂದು ಹೊದಿಕೆಯಿದ್ದರೆ ಇನ್ನೂ ಚೆನ್ನ. ಆ ಹೊದಿಕೆಯ ಮೇಲೆ, ವಿಕಾರವಾದ ಯಾವುದಾದರೂ ಚಿತ್ರವಿದ್ದರೆ, ಮತ್ತಷ್ಟು ಅನುಕೂಲ. ಚಿತ್ರವು ಆದಷ್ಟು ವಿಕಾರವಾಗಿರಲಿ: ಹೊದಿಕೆಯ ಕಾಗದವೆಲ್ಲಕ್ಕೂ ಹರಡಿರಲಿ. ಚಿತ್ರವನ್ನು ನೋಡಿದೊಡನೆಯೇ, ಗಾಬರಿಗೊಂಡು, ಭಾಷಾಭಿಮಾನಿಗಳ ಜೋಬಿನಿಂದ ಚಿಲ್ಲರೆ ಕಾಸೆಲ್ಲವೂ ಅಂಗಡಿಯವನ ಮೇಜಿನಮೇಲೆ ಉದುರಿಬಿಡಬೇಡವೆ? “ ಕುಂಭಕರ್ಣ ” ಎಂಬುದು ನಿಮ್ಮ ಪುಸ್ತಕವಾದರೆ, ಗ್ರಂಥದ ಮೇಲೆ ಹಳೆಯ ಕಾಲದ ಒಂದು ಕೊಡ, ಉದ್ದವಾದ ಒಂದು ಕಿವಿ – ಸಾಕು, ಸುವರ್ಣವೃಷ್ಟಿ ಆಗಿಹೋಗುತ್ತೆ ! ಹಾಗೆಯೇ, “ ಕವಿಯ ಸೋಲು ” ಅಂತ ನಿಮ್ಮ ಪುಸ್ತಕದ ಹೆಸರಾದರೆ ೧೦ ಅಂಗುಲ ಉದ್ದ – ೮ ಅಂಗುಲ ಅಗಲದ ಒಂದು ‘ ಆತ್ಮ ’ನ ಚಿತ್ರ ಬರೆದು, ಅದರ ಸುತ್ತಲೂ ಒಂಬತ್ತು ಮೂಲೆಗಳಲ್ಲೂ ಒಂದೊಂದು ಸಮಭಾಜಕ ವೃತ್ತವನ್ನು ಬರೆದು, ಒಂದೊಂದರಲ್ಲಿಯೂ ಒಂದೊಂದು ಹಸಿದ ಜಿಂಕೆ ಮರಿಯನ್ನು ಚಿತ್ರಿಸಿರಿ. ವಾಚಕರ ಧನಮನಗಳನ್ನು ಸೂರೆಮಾಡಲು ಆಗಲು ಇದಕ್ಕಿಂತ ಸುಲಭವಾದ ಉಪಾಯವನ್ನು ಇದುವರೆಗೆ ಯಾರೂ ಕಂಡು ಹಿಡಿದಿಲ್ಲ.

(ಆ) ಆಧುನಿಕ ಕನ್ನಡ ಸಾಹಿತ್ಯಕ್ಕೆ ಯಾವ ಒಂದು ಗ್ರಂಥವನ್ನು ಸೇರಿಸಬೇಕಾದರೂ, ಆದರಲ್ಲಿ ಕಡೆಯಪಕ್ಷ ೬೦ ಪುಟಗಳಾದರೂ ಇರಬೇಕು. ಇಲ್ಲದೆ ಹೋದಲ್ಲಿ, ಯಾರೂ ಅದಕ್ಕೆ ಎಂಟಾಣೆಯನ್ನು ಕೊಟ್ಟು ಕೊಂಡು

ಕೊಳ್ಳುವುದಿಲ್ಲ. ಆದುದರಿಂದ ಉದಾಹರಣೆಗಾಗಿ ಒಂದು "ಕವನ ಸಂಗ್ರಹ"ದಲ್ಲಿ,

ಪುಟ

೧. ಮುಖಪತ್ರ .... ೧
೨. ಸಮರ್ಪಣೆ (ಸಮರ್ಪಕವಾಗಿ ಮಾಡಬೇಕಾದ ಕೆಲಸ) .... ೧
೩. ಮುನ್ನುಡಿ ( ..... ಮೆಂಬರಾದ .. .. ರವರಿಂದ) ....೧೦
೪. ಪ್ರಸ್ತಾವನೆ (ಇನ್ನೊಬ್ಬ ಮೆಂಬರಿಂದ) .... ೬
೫. ಕವಿಯ ಪರಿಚಯ (ಕವಿಯಿಂದ) .... ೨
೬. ಗ್ರಂಥಕರ್ತನ ಋಣ (ವಾಚನಾಲಯಗಳು, ಸೂರ್ಯ ಚಂದ್ರರು, ಕೋಗಿಲೆ ನವಿಲುಗಳು, ಕೋ-ಆಪರೇಟಿವ್ ಸಂಘಗಳು ಮುಂತಾದವುಗಳಿಗೆ) ೩
೭. ವಿಷಯ ಸೂಚಿಕೆ (ವಿಷಯವಿಲ್ಲದಿದ್ದರೂ) .... ೧
೮. ಪ್ರತಿ ಒಂದು ಕವನದ ಅನಂತರ ಖಾಲಿ ಬಿಡಬೇಕಾದ ಜಾಗ (ಅಸಿಷ್ಟ, ಅಸಷ್ಟ, ಕಗ್ಗ ಎಂದು ಮುಂತಾಗಿ ವಾಚಕರು ಬರೆದುಕೊಳ್ಳುವುದಕ್ಕಾಗಿ) ಒಟ್ಟು..೧೫
೯. ಕೋಪವನ್ನು ಕಡೆಯತನಕ ತಾಳ್ಮೆಯಿಂದ ತಡೆಯಬಲ್ಲ ಮಹನೀಯರಿಗೆ ಅವರ ಅಭಿಪ್ರಾಯಗಳನ್ನು ಬರೆಯಲು, ಗ್ರಂಥದ ಕೊನೆಯಲ್ಲಿ ಖಾಲಿ ಬಿಡಬೇಕಾದ ಜಾಗ ಒಟ್ಟು .... ೪
೧೦. ಹಿನ್ನುಡಿ .... ೪
೧೧. ಶುದ್ಧಾಶುದ್ಧ .... ೨
೧೨. ಟಿಪ್ಪಣಿ (ಇದಕ್ಕಾಗಿಯೇ ಗ್ರಂಥದಲ್ಲಿ 'ಕೌಮುದಿ' (ಮುದಿಯಾದ ಹಸು), 'ಕಾರುತ್ತ' (ಮೋಟಾರು ಕಾರಿನಲ್ಲಿ ಹೋಗುತ್ತ) 'ಗ್ರಹಚಾರ' (ಮನೆಮನೆಯಲ್ಲಿಯೂ ಪ್ರಚಾರ) ಮುಂತಾದ ಹೊಸ ಪದಗಳನ್ನು ಕೆಚ್ಚೆದೆಯ ಗ್ರಂಥಕರ್ತನು ಉಪಯೋಗಿಸಬೇಕು) .... ೨
೧೩. ಮೊದಲ ಚರಣಗಳ ಪಟ್ಟಿ (ಗ್ರಂಥದಲ್ಲಿನ ಕವನಗಳಿಗೆ ಮೊದಲನೆಯ ಚರಣವಾದರೂ ಇರಲೇಬೇಕು) .... ೨
೧೪. ಇದೇ ಗ್ರಂಥಕರ್ತರ ಇತರ ಸಾಮಾನ್ಯ ಗ್ರಂಥಗಳು (ಕೈ ಬರಹದ ಗ್ರಂಥಗಳೂ ಸಹ) .... ೧
೧೫. ಇದೇ ಗ್ರಂಥಕರ್ತರು ಬರೆಯಬಹುದಾದ ಉದ್ಗ್ರಂಥಗಳು .... ೪
೧೬. ಕಡೆಯದಾಗಿ ವಾಚಕಮಹಾಶಯರಿಗೆ ಕಬ್ಬಿಗನ ಒಂದು ಮಾತು ... ೧
೧೭. ಮತ್ತೊಂದು ಮಾತು .... ೧

ಒಟ್ಟು ...೬೦

# ಭಾವಚಿತ್ರದ ಅನಾವರಣ

ಠಂಗ್, ಠಂಗ್, ಠಂಗ್, ಠಂಗ್—ಗಡಿಯಾರದಲ್ಲಿ ನಾಲ್ಕು ಹೊಡೆಯಿತು. ಅದನ್ನು ಗೋಡೆಗೆ ತಗುಲಿಸಿ ಅರ್ಧ ಗಂಟೆ ಕೂಡ ಆಗಿರಲಿಲ್ಲ. ನನಗೆ ತುಂಬಾ ಸಮಾಧಾನವಾಯಿತು. ಏಕೆಂದರೆ ಹಿಂದಿನ ದಿನ ಮನೆಯ ಇತರ ಸಾಮಾನುಗಳೊಂದಿಗೆ ನಾವು ಹೊಳೆಹಳ್ಳಿಯಿಂದ ನಂಜರಾಜಪೇಟೆಗೆ (ನನಗೆ ವರ್ಗವಾದ ಪ್ರಯುಕ್ತ) ಹದಿನೆಂಟು ಮೈಲಿ ಎತ್ತಿನ ಗಾಡಿಯಲ್ಲಿ ಪ್ರಯಾಣಮಾಡಿದ್ದೆವು. ಆಗ ಗಡಿಯಾರದೊಳಗಿನ ಯಂತ್ರತಂತ್ರಗಳಿಗೆ ಯಾವ ಅಪಾಯವೂ ತಗುಲದೆ ಇಷ್ಟು ಜೋಪಾನವಾಗಿ ಊರು ಸೇರಿದ್ದರಲ್ಲಿ ನನಗೆ ಸಂತೋಷವಾಯಿತು. ಅದೂ ಅಲ್ಲದೆ, ಆ ಗಡಿಯಾರವೇ ನಮ್ಮ ಮನೆಯ ನಾಗರಿಕತೆಯ ಗುರುತು. ಮೇಜು ಕುರ್ಚಿ ಎಲ್ಲವೂ ಹಳೆಯವು; ಮುರುಕಲು. ಆದರೆ ಅದು ಮಾತ್ರ ಹೊಸದು, ಹೊಳೆಪುಳ್ಳದ್ದು! ಹೊಳೆಹಳ್ಳಿ ಸ್ಕೂಲಿಗೆ ಬೇಕಾದ ಆಟದ ಸಾಮಾನುಗಳನ್ನು ಕೊಂಡುಕೊಂಡಾಗ ಕಂಪನಿಯವರು ನನಗೆ ಕೊಟ್ಟಿದ್ದು!—ಗಂಟೆ ಹೊಡೆದಾಗ, ನನ್ನ ಕಿರಿಯ ಹುಡುಗ—ಬಹಳ ಚಟುವಟಿಕೆ, ಚುರುಕಾದ ಬುದ್ಧಿ; ಅವನು ಹುಟ್ಟಿದ್ದೇ ಬೃಹಸ್ಪತಿವಾರ—"ಅಣ್ಣಾ, ಮೀಟಿಂಗಿಗೆ ಹೊತ್ತಾಯಿತು, ಹೋಗುವುದಿಲ್ಲವೆ?" ಅಂದ.

ಯಾವ ಮೀಟಿಂಗೆಂದು ನನಗೆ ತಕ್ಷಣ ಹೊಳೆಯಲೇ ಇಲ್ಲ. ಆದರೆ, ಭಗವಂತ ಹುಡುಗತನದಲ್ಲಿ ನಮಗೆ ಎಂಥ ಬುದ್ಧಿ ಕೊಟ್ಟಿರುತ್ತಾನೆ ನೋಡಿ. ಅವನು ಓಡಿಹೋಗಿ ನನ್ನ ಅಂಗಿಯ ಜೋಬಿನಿಂದ ಆಹ್ವಾನ ಪತ್ರಿಕೆಯನ್ನೇ ತೆಗೆದು ನನ್ನ ಕೈಗೆ ಕೊಟ್ಟ. ಅವನಿಗೆ ಇನ್ನೂ ಆರು ವರ್ಷ ತುಂಬಿರಲಿಲ್ಲ. ನಾನು ಅವನ ಜಾಣತನಕ್ಕೆ ಮೆಚ್ಚಿ ಅವನನ್ನು 'ಮುಂಡೇಗಂಡ' ಎಂದು ಮುದ್ದಿಸಿದೆ; ನನ್ನ ಕೈಲಿದ್ದ ಒಂದು ಸೀಬೇಕಾಯಿ ಹೋಳನ್ನು ಅವನ ಬಾಯಿಗೆ ಹಾಕಿ ತೃಪ್ತಿಪಡಿಸಿದೆ. ನಂಜರಾಜಪೇಟೆಗೆ ನಮ್ಮ ಗಾಡಿ ಬಂದು, ಹಿಂದಿನ ಹೆಡ್ಮೇಷ್ಟ್ರು ಇದ್ದ ಮನೆ ಮುಂಭಾಗದಲ್ಲಿ ನಿಂತಾಗ (ಅದನ್ನೇ

ನಾನೂ ನನ್ನ ವಾಸಕ್ಕೆ ಗೊತ್ತು ಮಾಡಿದ್ದೆ), ಒಬ್ಬ ಜವಾನ ಓಡಿಬಂದು, "ಬುದ್ಧೀ, ಒಸ ಎಡ್ಮೇಷ್ಟ್ರು ಯಾರು ಬುದ್ದೀ ?" ಎಂದು ಸ್ವಾಗತಸಮಿತಿಯ ಅಧ್ಯಕ್ಷನ ಕೆಲಸವನ್ನು ನಿರ್ವಹಿಸಿದ. 'ನಾನೇಕಣೋ' ಎಂದು ನಾನು ಹೇಳಿದಾಗ, ಅವನ ಮುಖದಲ್ಲಿ ಒಂದು ನಿಮಿಷ ಎಲ್ಲಿಂದಲೋ ಬಂದಿಳಿದು ಮಾಯವಾದ ಆಶಾಭಂಗವನ್ನು ಕಂಡು ನಾನು ಬೆಚ್ಚಿದೆ. ಅವನಿಂದ ಕಾಗದ ತೆಗೆದುಕೊಂಡು ಮನೆಗೆ ನುಗ್ಗಿದೆ. ಕಿರಿಯ ಹುಡುಗನ ಕೈಲಿ ಓದಿಸಿದೆ; ಕನ್ನಡ ಅಕ್ಷರಗಳನ್ನು ಚೆನ್ನಾಗಿ ಓದುವ ಅಭ್ಯಾಸ ಬರಲಿ ಅಂತ—"ಟೌನ್ ಕ್ಲಬ್ ಎಂಬ ಸಂಸ್ಥೆಯ ಸಂಸ್ಥಾಪಕರೂ, ಅದಕ್ಕಾಗಿ ಸರ್ಕಾರದಿಂದ ಒಂದು ನಿವೇಶನವನ್ನು ಉಚಿತವಾಗಿ ಸಂಪಾದಿಸಿಕೊಟ್ಟವರೂ ಆದ ಅಮಲ್ದಾರ್ ರಾಮಭದ್ರಯ್ಯನವರ ಭಾವಚಿತ್ರವನ್ನು ರಿಟೈರ್ಡ್ ಪೋಲೀಸ್ ಇನ್ಸ್ಪೆಕ್ಟರ್ ಭಂಗಾರಪ್ಪನವರು ಅನಾವರಣ ಮಾಡುತ್ತಾರೆ" ಎಂಬುದು ಅದರಲ್ಲಿಯ ಮುಖ್ಯ ಅಂಶ......ಒಳ್ಳೆಯ ಸಮಯದಲ್ಲಿ ಹುಡುಗ ಜ್ಞಾಪಿಸಿದ, ಎಂದು ಅಂದುಕೊಂಡೆ. ಯಾಕೆಂದರೆ, ಊರಿನ ಮಹಾ ಜನಗಳ ಪರಿಚಯವಾಗಲು ಇದು ಒಂದು ಶುಭ ಸನ್ನಿವೇಶ. ಅದೂ ಅಲ್ಲದೆ, ನಂಜರಾಜಪೇಟೆಗೆ ಕಾಲಿಟ್ಟ ಕೂಡಲೇ ಪುರಜನರಿಂದ ದೊರೆತ ಪ್ರಥಮ ಪುರಸ್ಕಾರವನ್ನು ಅಲ್ಲಗಳೆಯುವುದು ಎಂದಿಗೂ ಶ್ರೇಯಸ್ಕರವಾಗಲಾರದು. ಎಲ್ಲದಕ್ಕಿಂತ ಮೇಲಾಗಿ ಭಂಗಾರಪ್ಪನವರ ದ್ವೇಷ ಕಟ್ಟಿಕೊಂಡರೆ ಕ್ಷೇಮವಿಲ್ಲ. ಹಿಂದಿನ ಹೆಡ್ಮೇಷ್ಟ್ರು ಭಂಗಾರಪ್ಪನವರ ಇಬ್ಬರು ಗಂಡು ಮಕ್ಕಳಿಗೆ "ಪಾಠ ಹೇಳಿ" ಶಾಕಾಯ ಲವಣಾಯಚ ಅನ್ನುವಹಾಗೆ ತಿಂಗಳಿಗೆ ಐದು ರೂಪಾಯಿ ಗಿಟ್ಟಿಸುತ್ತಿದ್ದರಂತೆ. ಅವರೇ ನನಗೆ ಸೂಚನೆ ಕೊಟ್ಟಿದ್ದರು. ಅವರ ಹೇಳಿಕೆಯಮೇರೆ ನಾನು ಬೆಳಿಗ್ಗೆ ಎದ್ದಕೂಡಲೇ ಇನ್ಸ್ಪೆಕ್ಟರ ಮನೆಗೆ ಹೋಗಿ ನಮಸ್ಕಾರ ಹಾಕಿದೆ. ಅವರು, "ನಾಳೆಯಿಂದ ಬನ್ನಿ ಸ್ವಾಮಿ! ಅದಕ್ಕೇನು ? ಐದು ರೂಪಾಯಿ ಋಣ ನಿಮಗೂ ತೀರಿಸಿಬಿಡುತ್ತೇನೆ" ಎಂದು ಹೇಳಿದ್ದರು. ಆದ್ದರಿಂದ, ಮನೆಯಲ್ಲಿ ಪಾತ್ರೆ ಪದಾರ್ಥ ತೆಗೆದು ಜೋಡಿಸಿ ಇಡುವುದು ಇನ್ನೂ ಉಳಿದಿದ್ದರೂ ಕೂಡ (ಅವಳಿಗೆ, ಪಾಪ, ಎಂಟು ತಿಂಗಳು) ರುಮಾಲನ್ನು ಬಿಚ್ಚಿ ಬಿಗಿಯಾಗಿ ಕಟ್ಟಿ, ಅಂಗಿಯನ್ನು ಕೊಡವಿ ಹಾಕಿಕೊಂಡು, ಮೀಟಿಂಗಿಗೆ ಹೊರಟೆ.

ಹತ್ತು ಹನ್ನೆರಡು, ಹೆಜ್ಜೆ ಮುಂದೆ ಇಟ್ಟೆನೋ ಇಲ್ಲವೋ, ಹಿಂದಿನಿಂದ ಯಾರೋ ಒಬ್ಬರು, "ಕಾಮೇಶ್ವರಯ್ಯನವರೇ?" ಎಂದು ಕೂಗಿದರು. ನಿನ್ನೆ ರಾತ್ರಿ ಈ ಊರಿಗೆ ಹೊಸದಾಗಿ ಬಂದಿದೇನೆ, ಆಗಲೇ ನನ್ನ ಹೆಸರನ್ನು ಪತ್ತೆ ಮಾಡಿರುವ ಪುಣ್ಯಾತ್ಮ ಯಾರಪ್ಪ, ಎಂದು ಆಶ್ಚರ್ಯಪಟ್ಟೆ. ಹಿಂತಿರುಗಿ ನೋಡಿದರೆ, ಶ್ರೀಕಂಠಯ್ಯನವರು. ಅವರು ನಂಜರಾಜಪೇಟೆಯವರಾದರೂ, ಹಿಂದಿನ ದಿನ ನನಗೆ ದಾರಿಯಲ್ಲೇ ಸಿಕ್ಕಿದ್ದರು. ದಾರಿಯ ಮಗ್ಗುಲಲ್ಲಿ ಸೈಕಲನ್ನು ರಿಪೇರಿ ಮಾಡುತ್ತ ಕುಳಿತಿದ್ದ ಮಹಾರಾಯ ನಮ್ಮ ಗಾಡಿಯನ್ನು ನೋಡುತ್ತಲೂ, ಗಾಡಿಯವನನ್ನ ಹೆದರಿಸಿ, ನಮ್ಮನ್ನೂ ಒಪ್ಪಿಸಿ, ಸೈಕಲನ್ನು ಮೇಲೆ ಕಟ್ಟಿ ತಾನೂ ಒಳಕ್ಕೆ ನುಗ್ಗಿ ಕುಳಿತು ಊರು ಸೇರಿದ್ದ. ಅಂತು ಕೊಂಚ ತುಂಟ, ಕೀಟಲೆ ಮನುಷ್ಯ ಎಂಬುದು ನನಗೆ ತಿಳಿದಿತ್ತು. ಆದ್ದರಿಂದ, ಅವನು ಕರೆದದ್ದು ನನಗೆ ಅಪಶಕುನವೆನಿಸಿತು.

"ಕ್ಲಬ್ಬಿಗೆ ತಾನೇ?"

"ಹೌದು ಹೌದು, ನಿನ್ನೆ ನಾನು ಗಾಡಿಇಳಿಯುತ್ತಲೂ ಕಾಗದ ಬಂತು."

"ಬನ್ನಿ, ಬನ್ನಿ, ನಾನೂ ಅಲ್ಲಿಗೇ ಹೋಗುತ್ತಿದ್ದೇನೆ."

"ತಾವು ಸಿಕ್ಕಿದ್ದು ಒಳ್ಳೆಯದಾಯಿತು. ನನಗೆ ಈ ಊರಿನ ದೊಡ್ಡ ಮನುಷ್ಯರೆಲ್ಲರನ್ನೂ ಪರಿಚಯ ಮಾಡಿಕೊಡಬೇಕು."

"ಈ ಊರಲ್ಲಿ ಅಂಥಾ ದೊಡ್ಡವರು ಯಾರೂ ಇಲ್ಲ, ಸ್ವಾಮಿ. ತಮಗೆ ಟ್ರ್ಯಾನ್ಸ್‌ಫರ್ ಅನುಕೂಲವಾಗಬೇಕಾದರೆ, ಭಂಗಾರಪ್ಪನವರೊಬ್ಬರೇ."

"ಅವರ ಮನೆಗೆ ಬೆಳಿಗ್ಗೆ ಹೋಗಿದ್ದೆ ......."

"ಓಹೋ, ಪರವಾಯಿಲ್ಲ, ಆಗಲೇ ಬೇಟೆಗೆ ಹೊರಟುಬಿಟ್ಟಿದ್ದೀರಿ! ಅದು ಹೇಗೆ ಪತ್ತೆ ಮಾಡುತ್ತೀರಪ್ಪಾ?....ಆಸಾಮಿ ಇದ್ದರೋ ಮನೆಯಲ್ಲಿ?"

"ಇದ್ದರು, ಇದ್ದರು. ಬಹಳ ಒಳ್ಳೆಯವರು. ನಯವಾದ ಮಾತು. ಉದಾರ ......."

"ಸಾಕು, ಮೇಷ್ಟ್ರೆ! ನಿಮಗೇನೋ ಅವರು ಮಂಕುಬೂದಿ ಎರಚಿರಬಹುದು. ಆದರೆ, ಈ ಊರಲ್ಲಿ ಇನ್ನು ಯಾರ ಹತ್ತಿರಲೂ ಹೀಗೆ ಹೇಳಬೇಡಿ. ನಾವು ಮೇಲೆ ಮೇಲೆ ಅವರನ್ನು ಹೊಗಳುತ್ತೇವೆ, ಅಷ್ಟೆ. ಒಳಗೆಲ್ಲರಿಗೂ ಅವರ ಮೇಲೆ ಕಿಡಿಕಿಡಿ ಇದ್ದೇ ಇದೆ. ಶುದ್ಧ ಕಪಟ. ಅವರ

ಮೊದಲನೆಯ ಹೆಂಡತಿ ಹೇಗೆ ಸತ್ತಳು ಎಂಬ ಸಮಾಚಾರ ನಿಮ್ಮ ಕಿವಿಗೆ ಇನ್ನೂ ಬಿದ್ದಿಲ್ಲ ಅಂತ ಕಾಣುತ್ತೆ. ಪಾಪ, ಅನ್ನ ನೀರಿಲ್ಲದೆ ಆರು ತಿಂಗಳು ... ಇರಲಿ, ನಾನು ಯಾಕೆ ಹೇಳಲಿ ?"

"ಏನು ? ಏನು ?"

"ಏನೂ ಇಲ್ಲ ; ದೊಡ್ಡವರ ಮಾತು ನಮಗೆ ಯಾಕೆ ? ಅವರು ಎಷ್ಟಾದರೂ ಹಣವಂತರು. ಅಧಿಕಾರದಲ್ಲಿದ್ದವರು. ಅದೂ ಪೋಲೀಸ್ ಇಲಾಖೆಯಲ್ಲಿ. ಇಷ್ಟಕ್ಕೂ ಪ್ರತ್ಯಕ್ಷ ಪ್ರಮಾಣ ಏನೂ ಇಲ್ಲ. ನಡೆದದ್ದು ತುಮಕೂರಲ್ಲಂತೆ ...ಬಿಡಿ, ಬಿಡಿ, ಅದಿರಲಿ, ಮನೆ ಅನುಕೂಲವಾಗಿವೆಯೋ? ಈ ಊರಲ್ಲಿ ಚೇಳು ವಿಪರೀತ. ಜಾಗ್ರತೆಯಾಗಿರಬೇಕು, ಅಕಸ್ಮಾತ್ ಏನಾದರೂ ಆದರೆ, ನನಗೆ ಹೇಳಿ ಕಳುಹಿಸಿ, ಮಂತ್ರದವರನ್ನು ಗೊತ್ತು ಮಾಡಿಸುತ್ತೇನೆ."

ಅಷ್ಟುಹೊತ್ತಿಗೆ ಶ್ರೀಕಂಠಯ್ಯನವರ ಸ್ನೇಹಿತರು ಮೂರು ನಾಲ್ಕು ಜನರು ನಮ್ಮನ್ನು ಸೇರಿದರು. ಅವರೆಲ್ಲರಿಗೂ, ತಮ್ಮ ಬಾಲಕರ ವಿದ್ಯಾಭಿವೃದ್ಧಿಗೆ ಅಧಿದೇವತೆಯಾಗಿ ಬಂದಿರುವ ಮಹಾನುಭಾವ, ದಾಸನ ಪರಿಚಯ ವಾಯಿತು. ನಂಜರಾಜಪೇಟೆಯವರೆಲ್ಲರೂ ಸಭ್ಯರೆಂಬ ಭಾವನೆ ನನ್ನ ಮನಸ್ಸಿನಲ್ಲಿ ಮೂಡಿತು. ಶ್ರೀಕಂಠಯ್ಯನವರನ್ನು ಮಾತ್ರ ನನ್ನಿಂದ ಅಳತೆ ಮಾಡಲು ಸಾಧ್ಯವಾಗಲಿಲ್ಲ. ನನ್ನ ಕಿವಿಯಲ್ಲಿ ಅವರು ಹಾಕಿದ ವಿಷವು ನನ್ನನ್ನು ಪೀಡಿಸುತ್ತಿತ್ತು. ನಾಳೆಯಿಂದ ಪ್ರತಿದಿನವೂ ಬೆಳಿಗ್ಗೆ ಎದ್ದು ಭಂಗಾರಪ್ಪನವರ ಮುಖದರ್ಶನ ಮಾಡುವುದು ಹೇಗೆ ?....ಇಲ್ಲ. ನಿಜವಿರಲಾರದು. ಹೊಟ್ಟೆಕಿಚ್ಚಿನಿಂದ ಜನರು ಏನೇನೋ ಆಡಿಕೊಳ್ಳುವುದು ಸಹಜ. ಇಂಥಾ ಕೆಟ್ಟ ಕಥೆಗಳು ಪ್ರತಿ ಊರಿನಲ್ಲೂ ಇರುತ್ತವೆ. ಅವುಗಳಿಗೆ ಕಿವಿಗೊಡದಿರುವುದೇ ಮೇಲು. ಹಿಂದೆ ಒಂದು ಸಾರಿ ಕೊಪ್ಪದಲ್ಲಿದ್ದಾಗ, ಅಸಿಸ್ಟೆಂಟ್ ಇನ್ಸ್ಪೆಕ್ಟರಿಗೆ ಹುಣ್ಣಿಮೆದಿನ ಕೊಂಚ ಹುಚ್ಚು ಬರುವುದು ವಾಡಿಕೆ ಎಂದು ಅವರ ಆಫೀಸ್ ಜವಾನ ಹೇಳಿದ್ದನ್ನು ನಂಬಿ, ಅವರು ಅದೇ ದಿನವೇ ಸ್ಕೂಲಿಗೆ ಬಂದು ನನ್ನ ಮೇಲೆ ರೇಗಿಬಿದ್ದಾಗ, ನಾನು ಅವರ ಬಲಗೈಗೆ ಊರ ಜೋಯಿಸರು ಮಾಡಿಕೊಟ್ಟ ತಾಯಿತೆಯನ್ನು ಕಟ್ಟಿದ್ದೆ ! ಅದರಿಂದಾದ ಅನಾಹುತಗಳನ್ನು ತಟಾಯಿಸಿಕೊಂಡು ಬರುವುದಕ್ಕೆ ಭಗೀರಥ ಪ್ರಯತ್ನವೇ ಬೇಕಾಯಿತು. ಆದ್ದರಿಂದ,

ಇಂಥಾ ಸಮಾಚಾರಗಳನ್ನು ಒಂದು ಕಿವಿಯಿಂದ ಕೇಳಿ ಇನ್ನೊಂದು ಕಿವಿ ಯಿಂದ ಬಿಟ್ಟುಬಿಡುವುವೇ ಲೇಸೆಂದು ನಿಶ್ಚಯ ಮಾಡಿಕೊಂಡೆ.

"ಟೌನ್ ಕ್ಲಬ್" ಎಂಬುದು ವಿಶಾಲವಾದ ಕಾಂಪೌಂಡಿನೊಳಗಿದ್ದ ಒಂದು ಹಾಲು, ಅದು ಸೇರಿದ ಹಾಗೆ ಎರಡು ಕೊಠಡಿಗಳು, ಅಷ್ಟೆ. ಅದರ ಮುಂದೆ ಆ ದಿನ ಬಾಳೆ ಕಂದು, ಮಾವಿನಸೊಪ್ಪು, ಅಲಂಕಾರ ಮಾಡಿದ್ದರು. ಆಗಲೇ ಜನ ತುಂಬಿಹೋಗಿತ್ತು. ಶ್ರೀಕಂಠಯ್ಯನವರು ನನಗೆ ಒಂದು ಕುರ್ಚಿ ತರಿಸಿ ಹಾಕಿ ನನ್ನನ್ನು ಕೂಡಿಸಿದರು! "ಲೋ ವೆಂಗ್ಟ! ಹೊಸ ಹೆಡ್ಮಾಸ್ಟ ರಿಗೆ ಕುರ್ಚಿ ತೆಗೆದುಕೊಂಡು ಬಾರೋ!" ಎಂದು ಅವರು ಆರ್ಭಟಿಸಿದಾಗ, ಎಲ್ಲರೂ ನನ್ನ ಕಡೆ ನೋಡಿದರು. ನನ್ನ ರುಮಾಲು, ಅಂಗಿ, ಪಂಚೆ ಇವು ಇನ್ನೂ ಕೊಂಚ ಬೆಳ್ಳಗಿದ್ದಿದ್ದರೆ ನನ್ನ ಹೆಮ್ಮೆಗೆ ಮಿತಿಯೇ ಇರುತ್ತಿರಲಿಲ್ಲ. ತುಂಬಿದ ಸಭೆಯಲ್ಲಿ ಬಡಪಾಯಿ 'ಇಸ್ಕೂಲ್ ಮೇಷ್ಟ್ರಿಗೆ' ಯಾರು ತಾನೆ ಈಗ ಇಂಥಾ ಮರ್ಯಾದೆ ಮಾಡುತ್ತಾರೆ, ಹೇಳಿ. ಅಧ್ಯಾಪಕ ವರ್ಗದವರೆಲ್ಲ ರಿಗೂ ಅಂದು ಶ್ರೀಕಂಠಯ್ಯನವರು ಮನ್ನಣೆ ಮಾಡಿದ ಹಾಗಾಯಿತಲ್ಲವೆ?.... ಸಂಗೀತಗಾರರು ಆಗಲೇ ವೇದಿಕೆಯ ಮೇಲೆ ಹಾಜರಿದ್ದರು. ಅವರು ತಮ್ಮ ಕಂಠ, ತಂತಿ, ಮುಂತಾದ ಸಾಮಗ್ರಿಗಳನ್ನು ಸರಿಮಾಡಿಕೊಳ್ಳುತ್ತಿದ್ದರು. ಮೆಣಸು, ಹಿಟ್ಟು, ರಾಳ ಇವು ಪಕ್ಕದಲ್ಲೇ ಸಿದ್ಧವಾಗಿದ್ದುವು. ಭಂಗಾರಪ್ಪ ನವರೂ ಬಂದರು. ನನ್ನನ್ನು ಕಂಡು ಅವರು 'ಆರೋಗ್ಯ ತಾನೆ?' ಎಂದು ಕೈ ಸನ್ನೆ ಮಾಡಿದರು. ನಾನೂ 'ಹೌದು' ಎಂದು ಅದೇ ಭಾಷೆಯಲ್ಲಿ ಉತ್ತರ ಕೊಟ್ಟೆ. ನಮ್ಮಿಬ್ಬರ ಸಂಭಾಷಣೆಯನ್ನು ಎಷ್ಟು ಜನರು ನೋಡಿದ ರೆಂದು ತಿಳಿಯಲು ಸುತ್ತ ಕಣ್ಣೋಡಿಸಿದೆ. ಎಲ್ಲರೂ ಕಾರ್ಯಕ್ರಮ ಪ್ರಾರಂಭ ವಾಗುವುದನ್ನೇ ನಿರೀಕ್ಷಿಸುತ್ತಿದ್ದರು. ಆದರೂ, ಮೀಟಿಂಗನ್ನು ಪಕ್ರಮಿಸಲು ಯಾರಿಗೂ ಧೈರ್ಯ ಬರಲಿಲ್ಲ. ಏಕೆಂದರೆ ಭಾವಚಿತ್ರದ ನಿಧಿಗೆ ಹೆಚ್ಚಾಗಿ ಕೆಲಸ ಮಾಡಿ, ತಾನೂ ಮೂರು ರೂಪಾಯಿಗಳನ್ನು ಅದಕ್ಕಾಗಿ ದಾನಮಾಡಿ, ತನ್ನ 'ಅವಿಶ್ರಾಂತ ಪರಿಶ್ರಮ' ದಿಂದಲೂ 'ತನುಮನಧನ' ಗಳಿಂದಲೂ ಈ ಉತ್ಸವಕ್ಕೆ ಸಹಾಯ ಮಾಡಿದ ಸಬ್-ರಿಜಿಸ್ಟ್ರಾರ್ ಪೀರ್‌ಖಾನರವರು ಇನ್ನೂ ಬಂದಿರಲಿಲ್ಲ! ಭಾವಚಿತ್ರವನ್ನು ತಯಾರುಮಾಡಿದವರೂ ಕೂಡ ಖಾನರವರ ಅಳಿಯಂದಿರಾದ ಮೈಸೂರು ನಗರದ ಪ್ರಸಿದ್ಧ ಫೋಟೋಗ್ರಾಫರ್

ರಹ್ಮಾನ್ಖಾನರವರಂತೆ. ಅಂದಮೇಲೆ, ಎಲ್ಲರೂ ಖಾನರವರಿಗಾಗಿ ಕಾದಿರ ಬೇಕಾದದ್ದು ನ್ಯಾಯತಾನೆ? ಮಿಾಟಿಂಗನ್ನು ಪ್ರಾರಂಭಿಸಲು ಇನ್ನೊಂದು ಆತಂಕವೂ ಇತ್ತಂತೆ. ಅದೇನೆಂದರೆ, ಅನಾವರಣ ಮಾಡಬೇಕಾದ ಭಾವ ಚಿತ್ರವೂ ಕೂಡ ಇನ್ನೂ ಮೈಸೂರಿಂದ ಬಂದಿರಲಿಲ್ಲ! ಏಕೋ, ಏನೋ, ನಾಲ್ಕು ಗಂಟೆಗೆ ಬಂದಿರಬೇಕಾಗಿದ್ದ ಬಸ್ಸು ಇನ್ನೂ ಪತ್ತೆಯೇ ಇಲ್ಲ. ಈ ಅವ್ಯವಸ್ಥೆಯಿಂದ ಕ್ಲಬ್ಬಿನ ಚಾಲಕರೂ, ಸದಸ್ಯರೂ ಇತರರೂ ತಳಮಳಿಸು ತ್ತಿರುವಾಗ ಒಬ್ಬ ಆಳು ಓಡಿಬಂದು ಒಂದು ಚೀಟಿಯನ್ನು ಭಂಗಾರಪ್ಪನವರ ಕೈಗೆ ಕೊಟ್ಟ. ಸಾಹೇಬರು, ತಮಗೆ ಕೊಂಚ ತಲೇನೋವಾದ್ದರಿಂದ, ಸಂಗೀತ ಮುಗಿದಮೇಲೆ ಬರುತ್ತೇವೆಂದು ಬರೆದಿದ್ದರು.

ಆದ್ದರಿಂದ, ನಾರಾಯಣಪ್ಪನವರು "ಏನು ಸುಖಾ ಾ ಾ ಾ ಾ ಾ, ಇದು ಏನು ಸುಖಾ ಾ ಾ ಾ ಾ ಾ" ಎಂದು ಪ್ರಾರಂಭಮಾಡಿಯೇಬಿಟ್ಟರು. ಮೊಟ್ಟ ಮೊದಲು ಈ ಕೀರ್ತನೆಯನ್ನು ಹಾಡುವ ಸಂಪ್ರದಾಯವೇ ಇಲ್ಲದಿದ್ದರೂ, ಆದಿನ ಆ ಹಾಡು ಸನ್ನಿವೇಶಕ್ಕೆ ಬಹಳ ಚೆನ್ನಾಗಿ ಹೊಂದಿಕೊಂಡು ನಮ್ಮೆಲ್ಲ ರನ್ನೂ 'ಅಯ್ಯೋ' ಎನ್ನಿಸಿತು. ಸಂಗೀತದ ಗದ್ದಲದಿಂದ ಜನರಿಗೆ ಮಾತು ಕಥೆಗೆ ಅನುಕೂಲವಾದ ಹಿನ್ನೆಲೆ ಲಭಿಸಿತು. ಬಸ್ಸು ಏಕೆ ಬರಲಿಲ್ಲ, ಜಮ ಖಾನೆ ಯಾರ ಮನೆಯದು, ಭಂಗಾರಪ್ಪನವರು ಮಿಾಸೆಗೆ ಬಣ್ಣ ಹಾಕಿ ದಾರೆಯೇ ಇಲ್ಲವೇ, ಇತ್ಯಾದಿ ಸಮಸ್ಯೆಗಳನ್ನು ನನ್ನ ಸುತ್ತಮುತ್ತಲಿನವರು ಬಿಡಿಸಲು ಯತ್ನಿಸಿದರು. ಶ್ರೀಕಂಠಯ್ಯನವರೂ ಅವರ ಸ್ನೇಹಿತರೂ ಖಾನ್ ಸಾಹೇಬರು ಏತಕ್ಕೆ ಬರಲಿಲ್ಲ ಎಂಬ ತೊಡಕನ್ನು ತೆಗೆದುಕೊಂಡರು. ಅವ ರಿಗೆ ನಿಜವಾಗಿಯೂ ತಲೆನೋವಲ್ಲ, ಅವರ ಚೀಟಿಗೆ ಯಾವುದೋ ಗೂಢಾರ್ಥ ವಿರಬೇಕು, ಅವರನ್ನು ಸರಿಯಾಗಿ ಆಹ್ವಾನಿಸಿದರೋ ಇಲ್ಲವೋ, ಎಂಬ ಚರ್ಚೆ ವಿಪರೀತವಾಯಿತು. ಕೊನೆಗೆ ಶ್ರೀಕಂಠಯ್ಯನವರು ಈ ರೀತಿ ಇತ್ಯರ್ಥ ಮಾಡಿದರು. "ಭಂಗಾರಪ್ಪನವರ ಮೊದಲನೆಯ ಹೆಂಡತಿ ಮಗ ಚಿನ್ನಪ್ಪ ನವರು ತನ್ನ ತಾಯಿ ಫೋಟೋ ಒಂದನ್ನು ದೊಡ್ಡದಾಗಿ ತೆಗೆಯಲು ರಹ್ಮಾನ್ ಖಾನರ ಅಂಗಡಿಗೆ ಕಳುಹಿಸಿದ್ದರಂತೆ. ರಾಮಭದ್ರಯ್ಯನವರ ಭಾವಚಿತ್ರ ತಯಾರುಮಾಡುವ ಕೆಲಸವನ್ನು ವಹಿಸಲು ಭಂಗಾರಪ್ಪನವರು ಅವರ ಅಂಗ ಡಿಗೆ ಹೋದಾಗ ಅದನ್ನು ಕಂಡರಂತೆ. "ಅಯ್ಯೋ ಇವಳು ಹೇಗೆ ಇಲ್ಲಿ

ಬಂದಳು ?" ಎಂದು ಹೇಳಿ ಸರಸರನೆ ಹೊರಟುಹೋದರಂತೆ. ಜತೆಯಲ್ಲಿದ್ದ ಖಾನ್‌ಸಾಹೇಬರು ತನ್ನ ಅಳಿಯನ ಅಂಗಡಿಯನ್ನು ಬಿಟ್ಟು ಇನ್ನೊಂದುಕಡೆ ಕೊಡಕೂಡದೆಂದು ಕೂಗಿ ರೇಗಿದ್ದರಿಂದ ಕೊನೆಗೆ ಅಲ್ಲೇ ಭಾವಚಿತ್ರ ತಯಾರಾಗುತ್ತಿದೆಯಂತೆ. ಅಂದಿನಿಂದ ಅವರಿಬ್ಬರಿಗೂ ಮನಸ್ತಾಪ ಬೆಳೆದುಬಂದು ಈಗ ಇಬ್ಬರೂ ಒಂದೇ ಕಡೆ ಸೇರುವುದೇ ಇಲ್ಲವಂತೆ" ಇತ್ಯಾದಿಯಾಗಿ ಅವರು ಕಥೆ ಕಟ್ಟಿದರು. ಅಂತು, ಅವರ ಚರ್ಚೆಗಳಿಂದ ನಂಜರಾಜಪೇಟೆಯ ಕಿಲುಬು ಕೊಳಕುಗಳು ನನಗೆ ಕೊಂಚ ತಿಳಿದಂತಾಯಿತು.

ಇದ್ದಕ್ಕಿದ್ದಹಾಗೆ 'ಸಂಗೀತ' ನಿಂತಿತು. ಎಲ್ಲರೂ ಥಟಕ್ಕನೆ ಮಾತು ನಿಲ್ಲಿಸಿ ವೇದಿಕೆಯಕಡೆ ನೋಡಿದೆವು. ಅಲ್ಲಿ, ಅಯ್ಯೋ! ಏನು ಅನಾಹುತ! ತಬಲದವನು ಕೆಳಗೆ ಬಿದ್ದಿದ್ದಾನೆ. ಹಲ್ಲುಗಳನ್ನು ಕಟಕಟನೆ ಕಚ್ಚುತ್ತಿದಾನೆ. ಕೈಕಾಲುಗಳನ್ನು ಭೀಮಬಲದಿಂದ ಬಡಿಯುತ್ತಿದಾನೆ. ಬಾಯಿಂದ ನೊರೆ ಬೇರೆ. ಭಂಗಾರಪ್ಪನವರು, ತಮ್ಮ ಹಿಂದಿನ ಪೋಲೀಸ್ ಕೆಲಸವನ್ನು ಸ್ಮರಿಸುತ್ತಾ, ಸುತ್ತಲಿಂದ ನುಗ್ಗಿ ಬರುತ್ತಿದ್ದ ಸಂದಣಿಯನ್ನು ದೊಣ್ಣೆಯಿಂದ ಹಿಂದಕ್ಕೆ ಅಟ್ಟುತ್ತಿದಾರೆ. ಇಬ್ಬರು ಮೂವರು ತಬಲದವನ ಶುಶ್ರೂಷೆಯಲ್ಲಿ ನಿರತರಾಗಿದಾರೆ. ಅವನಿಗೆ, ಆಗಾಗ, ಹೀಗಾಗುವುದುಂಟಂತೆ. ಅವನ ಮುಖಕ್ಕೆ ನೀರೆರಚಿ, ಬಾಯಿಗೆ ಬೀಗದಕೈ ತುರುಕಿ (ಕಬ್ಬಿಣದ ಸಾಮಾನನ್ನು ಕಂಡರೆ ಬಾಯನ್ನು ಬಿಗಿಹಿಡಿದಿರುವ ಭೂತವು ತೊಲಗುವುದೆಂಬ ಭ್ರಮೆಯಿಂದ ಮಾಡಿದ ಉಪಚಾರವದು) ಗಾಳಿ ಬೀಸುತ್ತಿದ್ದರು. ನಾರಣಪ್ಪನವರು, ಪಾಪ, "ಈ ಕಪಿ ಬಂದರೆ ಹೀಗೆ. ನನ್ನ ಜತೆಯಲ್ಲಿ ಕೂತ ದಿನವೆಲ್ಲವೂ ಹೀಗೆಯೇ ಬಿದ್ದೊದ್ದಾಡುತ್ತಾನೆ, ಶನೀಶ್ವರ. ಇವನು ಬೇಡ, ಇನ್ನು ಯಾರನ್ನಾದರೂ ಕರೆಯಿರಪ್ಪಾ ಅಂದರೆ, 'ಬಿಟ್ಟೆ ಸಿಕ್ಕುತ್ತಾನೆ', ಅಂತ .." ಎಂದು ತುಂಬಾ ಗೋಳಾಡಿದರು. ಪಿಟೀಲಿನವನು ಮೆತ್ತಗೆ ಕಂಬಿಕಿತ್ತ.

ಈ ಗಲಾಟೆಯಲ್ಲಿ ಬಸ್ಸು ಬಂದದ್ದೂ, ಶ್ರೀಕಂಠಯ್ಯನವರು ಸ್ವತಃ ಹೋಗಿ ತಸ್ವೀರನ್ನು ತೆಗೆದುಕೊಂಡು ಒಂದು ಕೊಠಡಿಗೆ ಹೋಗಿ, ಅನಾವರಣಕ್ಕೆ ಅನುಕೂಲಿಸುವಹಾಗೆ ಅದಕ್ಕೆ ಅಂಚು ಹೊಲೆದು ಬಣ್ಣದ ದಾರವನ್ನು ಕಟ್ಟಿದ್ದ ಬಟ್ಟೆಯನ್ನು ಹಾಕಿ, ತ್ರಿಪಾದದಮೇಲೆ ಅದನ್ನೊರಗಿಸಿ, ಅವರು ಹಾಲಿನಲ್ಲಿ ತಂದಿಟ್ಟದ್ದನ್ನೂ ಯಾರೂ ನೋಡಲೇ ಇಲ್ಲ. "ಆ ಮಹರಾಯ

ಮೊದಲೇ ಹೇಳಿದ್ದ. ಫೋಟೋವನ್ನು ಸಿದ್ಧಮಾಡುವ ಕೆಲಸ ನನ್ನದು. ಇನ್ನೊಬ್ಬರೂ ಬರಕೂಡದು ಎಂದು" ಅಂತ ಅವರ ಸ್ನೇಹಿತರೊಬ್ಬರು ನನಗೆ ಹೇಳಿದರು. "ಇನ್ನೊಬ್ಬ ಯಾಕೆ ಹೋಗುತ್ತಾನೆ, ಹೇಳಿ. ಸದ್ಯಃ, ಆ ತೊಂದರೆ ತಪ್ಪಿತಲ್ಲಾ, ಅಷ್ಟೇ ಸಾಕು. ಅದನ್ನೆಲ್ಲಾ ಕಟ್ಟುವುದು, ಮಾಡು ವುದು ಯಾರಿಗೆ ಬರುತ್ತೆ ? ಅದೂ ಅಲ್ಲದೆ ಅಸಾಧ್ಯ ಅವನು ! ತಾನು ಒಂದು ಕೆಲಸ ನೆರವೇರಿಸುತ್ತೇನೆ, ಎಂದು ಒಪ್ಪಿಕೊಂಡುಬಿಟ್ಟರೆ, ಅದನ್ನು ಮಾಡು ವಾಗ ಇನ್ನಾರಾದರೂ ತಲೆಹಾಕಿದರೆ ತಲೆ ಒಡೆದುಹಾಕುವುದಕ್ಕೂ ಹೇಸುವು ದಿಲ್ಲ" ಎಂದು ಅವರು ಸ್ತೋತ್ರಮಾಡಿದರು. ಆಗ, ಶ್ರೀಕಂಠಯ್ಯನವರೇ ನಮ್ಮ ಹತ್ತಿರ ಬಂದು ಕುಳಿತರು. ತಬಲದವನನ್ನು ವರಾಂಡಾಗೆ ಸಾಗಿಸಿದ ಮೇಲೆ, ಭಂಗಾರಪ್ಪನವರು ಉಪನ್ಯಾಸ ಮಾಡುವುದಕ್ಕಾಗಿ ಎದ್ದರು. ಪಾಪ, ನಾರಣಪ್ಪನವರು, ಇನ್ನೂ ಶಪಿಸುತ್ತಲೇ ಇದ್ದರು. "ನನಗೆ ಹೊತ್ತಾ ಯಿತು" ಎಂದು ಹೇಳಿ 'ಕೂಸಿ' ವೈದ್ಯದ ಅರ್ಧಾಂಗಸ್ನಾನಕ್ಕಾಗಿ ಶ್ರೀಕಂಠ ಯ್ಯನವರೂ ಎದ್ದರು.

ಭಂಗಾರಪ್ಪನವರ ಉಪನ್ಯಾಸ ನನಗೆ ಚೆನ್ನಾಗಿ ಕೇಳಿಸಲಿಲ್ಲ. ನನ ಗೇನೋ ರಾಮುಭದ್ರಯ್ಯನವರ ಜೀವನಚರಿತ್ರೆಯನ್ನೂ, ಅವರು ನಂಜರಾಜ ಪೇಟೆಯಲ್ಲಿ ಮಾಡಿದ ಅಮೋಘವಾದ ಕೆಲಸಗಳನ್ನೂ ತಿಳಿದುಕೊಳ್ಳಬೇಕೆಂಬ ಕುತೂಹಲ. ಆದರೆ, ಜನರ ಗುಜುಗುಜು, ಇನ್‌ಸ್ಪೆಕ್ಟರವರ ಕೀರಲ ಧ್ವನಿ ಇವುಗಳ ದೆಸೆಯಿಂದ ಅಲ್ಲಲ್ಲಿ ಕೆಲವು ಮಾತುಗಳು ಮಾತ್ರ ನನ್ನ ಕಿವಿಗೆ ಬಿತ್ತು, ಅಷ್ಟೆ. "ವಿಕ್ಟೋರಿಯಾ ಆಸ್ಪತ್ರೆ........ರೋಗ........ಗುಣಮುಖ........ ನಾಲ್ಕು ವರ್ಷ....ಹಾಸನ ...ಹಲಸಿನತೊಳೆ....ಶಿವಭಕ್ತ....ರಾಮನವಮಿ.... ಐ. ಜಿ.....ಭಗವಂತ ...ಕ್ಲಬ್....ಕ್ಲಬ್....ಕ್ಲಬ್" ಇಷ್ಟು ಮಾತ್ರ ವಿಷಯ ಗಳನ್ನು ನಾನು ಸಂಗ್ರಹಿಸಿದೆ. ಇವುಗಳಿಂದ ರಾಮುಭದ್ರಯ್ಯನವರ ಸ್ವರೂಪ ವನ್ನೂ ಸ್ವಭಾವವನ್ನೂ ಕೊಂಚಮಟ್ಟಿಗೆ ಚಿತ್ರಿಸಲು ನನಗೆ ಸಾಧ್ಯವಾಯಿತು. ಮೂರನೆಯಸಾರಿ ಅವರು 'ಕ್ಲಬ್' ಎಂದಾಗ, ವೇದಿಕೆಯ ಮೇಲಿದ್ದ ಕೆಲ ವರು ಚಪ್ಪಾಳೆ ತಟ್ಟಿದರು. ನಾವೂ ಸೇರಿದೆವು. ಉಪನ್ಯಾಸ ಮುಗಿಯಿತೆಂದು ಆಗ ನಮಗೆ ಗೊತ್ತಾಯಿತು. ಅನಂತರ, ಭಂಗಾರಪ್ಪನವರು ಕೊಂಚ ಮುಂದೆ ಬಂದು ಕೆಳಕ್ಕಿಳಿದು ಗೋಡೆ ಅಂಚಿನಲ್ಲಿ ಒರಗಿಸಿಟ್ಟಿದ್ದ ತ್ರಿಪಾದದಲ್ಲಿದ್ದ ಭಾವ

ಚಿತ್ರವನ್ನು ಅನಾವರಣ ಮಾಡಲು ಬಂದರು. ಕಾರ್ಯದರ್ಶಿಗಳು ಬಣ್ಣದ ದಾರವನ್ನು ಅವರ ಕೈಗೆ ಕೊಟ್ಟು, ಮೆಲ್ಲಗೆ ಒಂದು ಕಡೆಗೆ ಎಳೆಯಬೇಕೆಂದು ಸೂಚನೆ ಕೊಟ್ಟರು. "ರಾಮಭದ್ರಯ್ಯನವರ ನಗುಮೊಗ ನಮಗೆಲ್ಲರಿಗೂ ಯಾವಾಗಲೂ ಆನಂದವನ್ನು ಕೊಡಲಿ, ಈ ಭಾವಚಿತ್ರವನ್ನು ನಾವೆಲ್ಲರೂ ಅನೇಕ ಕಾಲ ನೋಡಿ ಸಂತೋಷಪಡುವಂತೆ ಭಗವಂತನು ಅನುಗ್ರಹಿಸಲಿ!" ಎಂದು ಹೇಳಿ, ದಾರವನ್ನೆಳೆದರು. ಚಿತ್ರಕ್ಕೆ ಹೊದ್ದಿದ್ದ ಬಟ್ಟೆ ಮೆಲ್ಲಗೆ ಒಂದು ಪಕ್ಕಕ್ಕೆ ಸರಿಯಿತು.

"ಅಯ್ಯೋ!" ಎಂದು ಕಿರಿಚಿಕೊಂಡು ಭಂಗಾರಪ್ಪನವರು ಒಂದು ಕುರ್ಚಿಯ ಒಳಕ್ಕೆ ಬಿದ್ದರು! ರಹ್ಮಾನ್‌ಖಾನರವರು ಚಿನ್ನಪ್ಪನವರಿಗೆ ಕಳುಹಿಸ ಬೇಕಾದ 'ರಂಗಮ್ಮ'ನವರ ಫೋಟೋವನ್ನು ನಂಜರಾಜಪೇಟೆಗೆ ಕಳುಹಿಸಿ ಬಿಟ್ಟಿದ್ದರು. ಎಂಥಾ ಅನಾಹುತ! ಶ್ರೀಕಂಠಯ್ಯನವರೂ ಕೂಡ ಅವರಿಗೆ ಈ ಶಿಕ್ಷೆ ಆಗಲೆಂದೇ ಈ ರೀತಿ ಮಾಡಿ ಇಲ್ಲಿಂದ ಪರಾರಿಯಾಗಿರುವರೆಂದು ನಾನು ಊಹಿಸಿದೆ. ಅನೇಕರು ಭಂಗಾರಪ್ಪನವರನ್ನು ಹಾಸ್ಯ ಮಾಡಿದರು; ಗಹಗಹಿಸಿ ನಕ್ಕರು; ರಂಗಮ್ಮನವರ ಭಾವಚಿತ್ರವನ್ನು ನೋಡಲು ಮುಂದಕ್ಕೆ ನುಗ್ಗಿದರು ...ಆ ಗದ್ದಲದಲ್ಲಿ ಯಾರೂ ಭಂಗಾರಪ್ಪನವರ ಶುಶ್ರೂಷೆಯನ್ನೇ ಮಾಡಲಿಲ್ಲ. ಯಾರೂ ಅವರನ್ನು ಸಂತೈಸಲು ಹೊರಡಲಿಲ್ಲ. ನನಗೆ ಅವರನ್ನು ನೋಡಿ, "ಅಯ್ಯೋ! ಪಾಪ!" ಎಂದೆನಿಸಿತು. ಅವರ ಹತ್ತಿರ ಹೋಗಿ, ಒದ್ದೆ ಬಟ್ಟೆಯಿಂದ ಅವರ ಕಣ್ಣೊರಸಿದೆ; ಮೆತ್ತಗೆ ಕೈ ಹಿಡಿದು ಎತ್ತಿದೆ ಪಾಪ! ಅವರು ನಿಧಾನವಾಗಿ ಕಣ್ಣು ತೆರೆದರು. ಯಾವುದೋ ಭಯಂಕರ ರೂಪವನ್ನು ಕಂಡು ಹೆದರಿದವರಂತೆ ಕಣ್ಣಾರಳಿಸಿ ತನ್ನನ್ನು ಹೊರಗೆ ಕರೆದುಕೊಂಡು ಹೋಗುವಂತೆ ಸನ್ನೆ ಮಾಡಿದರು. ನಾನು ಅವರನ್ನು ಮೆಲ್ಲಗೆ ನಡೆಸಿಕೊಂಡು ಹೋದೆ. ದಾರಿಯಲ್ಲಿ ಅವರು ಗದ್ಗದ ಸ್ವರದಲ್ಲಿ, "ಯಾರು? ನೀವೋ? ಸರಿ, ಸರಿ! ನೀವು ಹೊಸಬರು. ನಿಮಗಿನ್ನೂ ಪಾಪಿಗಳು ಆ ಕಥೆ ಹೇಳಿಲ್ಲ ಅಂತ ಕಾಣುತ್ತೆ. ಅವಳನ್ನು ಕಳೆದುಕೊಂಡದ್ದೂ ಅಲ್ಲದೆ, ಈಗ, ಇದು ಬೇರೆ....ಅಯ್ಯೋ" ಎಂದು ಗೋಳಾಡಿದರು.

ಅಂತು, ನಾನು ಆ ಮೀಟಿಂಗಿಗೆ ಹೋದುದು ಒಳ್ಳೆಯದಾಯಿತು, ಇಲ್ಲದಿದ್ದರೆ ಏನು ಗತಿ ಎಂದು ಅಂದುಕೊಂಡೆ.

---

# ನನ್ನಾಕೆ

ಆಕೆ : ಎಲ್ಲಿ ? ನಿಮ್ಮನ್ನೇ, ಅಂದರೆ ! ಏನಿದು ? ನಿದ್ದೆ ಮಾಡುತ್ತಿದೀರೇನು ?

ನಾನು : ........ಹುಂ. ಬರುತ್ತಾ ಇದೆ, ಕೊಂಚ.

ಆಕೆ : ಓ ! ನಾನು ಬಂದದ್ದರಿಂದ ಎಚ್ಚರ ಆಗಿಹೋಯಿತೋ ?

ನಾನು : ಇಲ್ಲ ...ಹಾಗಂದರೇನು ? ...ನಿದ್ದೆಯೇನೋ, ಬಂದಿತ್ತು.

ಆಕೆ : ಇನ್ನೇನೂ ಇಲ್ಲ. ಕೊಂಚ ಗಂಜಿ ತೆಗಿದುಕೊಳ್ಳುತ್ತೀರಾ ಅಂತ....

ನಾನು : ಬೇಡ, ಕಣೆ. ಹೋಗು. ನಾನು ನಿದ್ದೆ....

ಆಕೆ : ಹಾಗೆ ಹೇಳಬೇಡಿ ! ತಂದಿದೇನೆ, ಇಲ್ಲಿ ನೋಡಿ. ಸ್ವಲ್ಪ ಕುಡಿಯಿರಿ!

ನಾನು : ಬೇಡ. ನಿದ್ದೆ ಮಾಡಿದಮೇಲೆ, ಬೇಕಾದರೆ ...

ಆಕೆ : ಗಂಜಿ ಬೇಡದೆ ಇದ್ದರೆ, ಬರಿಯ ಹಾಲು ತಂದುಬಿಡುತ್ತೇನೆ, ಕಾಯಿಸಿ ಇಟ್ಟಿದೇನೆ.

ನಾನು : ಏನೂ ಬೇಡ, ಹೋಗು !

ಆಕೆ : ಚಿಕ್ಕ ಮಕ್ಕಳ ಹಾಗೆ ಹೀಗೆ ಹಟ ಹಿಡಿಯಬೇಡಿ, ಅಂದರೆ. ಬರಿಯ ಹಾಲು ಬೇಡವೆ ಇದ್ದರೆ, ಕೊಂಚ ಓವಲ್‌ಟೇನು ಹಾಕಿ ಕೊಡುತ್ತೇನೆ. ಮೊನ್ನೆ ತಂದದ್ದು ಇನ್ನೂ ಒಂದು ಚಮಚ ಉಳಿದಿದೆ.

ನಾನು : ಬೇಡ.

ಆಕೆ : ಇಲ್ಲ, ಅದನ್ನು ಕುಡಿದರೆ, ನಿದ್ದೆ ಚೆನ್ನಾಗಿ ಬರುತ್ತಂತೆ, ಡಾಕ್ಟರು ...

ನಾನು : ಅಯ್ಯೋ ! ರಾಮ ! ಬೇಕಾಗಿಲ್ಲ, ಕಣೆ, ಅದು ! ಯಾಕೆ ಸುಮ್ಮನೆ ಗೋಳಾಡಿಸುತ್ತೀಯೇ, ನನ್ನನ್ನ ?

ಆಕೆ : ಇದು ಬೇರೆ ಪ್ರಾರಂಭವಾಯಿತೋ ? ಮನೆಯವರ ಮೇಲೆಲ್ಲಾ ರೇಗಿ ಬೀಳೋದು ! ಸರಿ ! ಇನ್ನೇನು ? ದೇವರೇ ಗತಿ ! ...ಅಲ್ಲಾ ! ಈಗ ಗೋಳಾಡಿಸುವುದು ಯಾರು ? ನೀವೋ, ನಾನೋ ?

ನಾನು : ಸುಮ್ಮನಿರೆ, ಸಾಕು ! ಸದ್ಯಕ್ಕೆ, ನನಗೆ ಯಾವುದೂ ಬೇಕಾಗಿಲ್ಲ. ನೀನು ಹೋಗಿ ಮಲಗಿಕೋ !

ಆಕೆ : ಕೊಂಚ ಬಾರ್ಲಿ ನೀರು ತರಲೇ ?

ನಾನು : ............

ಆಕೆ : ಬೇಡವೋ ? ಹಾಗಾದರೆ, ನಿಂಬೆ ಹಣ್ಣಿನ ರಸ ? ಅದನ್ನಾದರೂ ತೆಗಿದುಕೊಳ್ಳಿ. ಬಿಸಿನೀರಲ್ಲಿ....

ನಾನು : ............

ಆಕೆ : ಹಾಗಾದರೆ, ತಣ್ಣೀರಲ್ಲೇ ಹಿಂಡಿ ತಂದುಬಿಡುತ್ತೇನೆ. ಆಗ ಬಹುದೋ ?

ನಾನು : ಏನಾದರೂ, ನಿನಗಿಷ್ಟ ಬಂದದ್ದನ್ನು ಕೊಡು. ಬೇಗ ಆಗಲಿ.

ಆಕೆ : ಇಗೋ, ತಂದಿದೇನಲ್ಲಾ, ಗಂಜಿ, ಇದನ್ನೇ ಕುಡಿದುಬಿಡಿ. ಹಾಗಾದರೆ !

ನಾನು : ಬೇಡ.

ಆಕೆ : ಗಂಜಿ ಬೇಡದೆ ಇದ್ದರೆ, ಬರಿಯ ಹಾಲು ತಂದುಬಿಡುತ್ತೇನೆ, ಕಾಯಿಸಿ ಇಟ್ಟಿದೇನೆ.

ನಾನು : ಅಯ್ಯೋ ! ದೇವರೇ ! ಮತ್ತೆ ಅದನ್ನೇ ಪ್ರಾರಂಭಿಸಿಬಿಟ್ಟೆಯಾ ? ನಿನ್ನ ಕೈಯಲ್ಲಿರುವುದೇನು ? ಹಾಳು, ಅದನ್ನೇ ಕೊಡು ! ನಿದ್ದೆ ಮಾಡಬೇಕು, ನಾನು .......

ಆಕೆ : ಆರಲಿ, ತಡೆಯಿರಿ .......

---

# ವಂದನಾರ್ಪಣ

## [ಕಾರ್ಯದರ್ಶಿಗಳ ಉಪಯೋಗಕ್ಕಾಗಿಯೇ ಬರೆದದ್ದು]

---

ಕಾರ್ಯದರ್ಶಿ :

ಅವರನು ಕೇಳಿ, ಇವರನು ಬೇಡಿ,
ಕಂಬನಿ ಸುರಿಸುವ, ಬಹು ಕೊಂಡಾಡಿ,
ನೀವೇ ದೇವರು, ಲೆಕ್ಚರು ಕೊಡಿರಿ !
ಬನ್ನಿರಿ, ಕನ್ನಡ ಸೇವಾ ಸಂಘಕೆ !
ಬನ್ನಿರಿ, ಅಗ್ರಾಸನದಲಿ ಕೂಡಿರಿ,
ಬಿಡದೇ ಪರಿ ಪರಿ ಅತ್ತೂ, ಕರೆದೂ,
ಕಡೆಯಲಿ ಬಿದ್ದರು ಇವರಾಬಲೆಗೆ !

ಸಹಾಯ ಕಾರ್ಯದರ್ಶಿ :

ಆಮೇಲೆ,

ಕಾರ್ಯದರ್ಶಿ :

ಮನೆಯಲಿ ಕಟುತರ ಬೈಗಳ ತಿಂದು
ಬಿಸಿಲಲಿ ಜಾಗಟೆ ಬಡಿಯುತ ಬಂದು
ಊರಿನ ಜನರನು ಕರೆದರೆ ನಾವು—
" ಏಳಿರಿ, ಸ್ವಾಮಿ ! ಲೆಕ್ಚರ ಕೇಳಿರಿ,"
ಎನ್ನುತ ಹಲ್ಲನು ಕಿರಿದರೆ ನಾವು—

ಸಹಾಯ ಕಾರ್ಯದರ್ಶಿ :

ಅಯ್ಯೋ !

ಕಾರ್ಯದರ್ಶಿ :

ಹರಟೆಯ ಹೊಡೆವರು ಹಾಕುತ ಮೆಲುಕನು,
ಗೊರಕೆಯನೆಳೆವರು ನೆಲಸಮ ಮಲಗಿ,
" ಧಾಂಡಿಗರಿವರಿಗೆ ಕೆಲಸವೆ ಇಲ್ಲವೆ ?"
" ನಾಟಕ ನಾಟ್ಯಗಳಿರಿಸುವುದಿಲ್ಲವೆ ?"
" ಹರಿಕಥೆ ಕೇಳೀ, ಪತಿಗುಪಚರಿಸೀ,
ಹರಪದಸೇರುವ ಹೆಂಗಸಿಗೇತಕೆ
ನಾಡಿನ, ನುಡಿಯಾ ಬದುಕಿನ ಚಿಂತೆ ?"
" ಗಂಡಸರಾಗಲಿ ವಿದ್ಯಾವಂತರು,
ಮಂಡೆಯೊಳೆಲ್ಲವು ತುಂಬಿವೆ " ಅಂತೆ !
ಲೆಕ್ಚರು ರಾತ್ರಿಯೊಳೇರ್ಪಾಟಾದರೆ,
" ಸಾಯಂಕಾಲವೆ ಬರಲನುಕೂಲ."
ಸಂಜೆಗೆ ಲೆಕ್ಚರು ನಡೆಯುವುದಾದರೆ,
" ಕತ್ತಲೆ ಹೊತ್ತೇ ತಂಪಾಗಿತ್ತು."
ಮಳೆ ಹನಿ ಬಿದ್ದರೆ, " ನೆಗಡೀ ಜಾಸ್ತಿ,"
ಚಳಿ ಚಳಿ ಕಾಲದಿ, " ನಶ್ಯವೆ ನಾಸ್ತಿ !"
" ಫುಡುಗರ ಹಾವಳಿ ನಮಗಳಿಗೇತಕೆ ?"
" ಅಡುಗೆಯ ಮನೆಯಲು ಆಡುವ ನುಡಿಯಿದು !
ಕನ್ನಡ ಮಾತಿಗೆ ಸೇವೆಯದೇತಕೆ ?"
ಈಸರಿ ಜರಿದು, ಹುರುಪನು ತುಳಿದು,
ಮುಖವನು ಮುರಿವರು, ಬರಿದೇ ಬಡಿದು.

ಸಹಾಯ ಕಾರ್ಯದರ್ಶಿ :

ಆದರೆ,

ಕಾರ್ಯದರ್ಶಿ :

ಕೆಲವರು ಹಿರಿಯರು ಕನಿಕರದಿಂದ,
ಎದೆ ಹಾಲೆರೆದಾ ತಾಯಿಯ ನುಡಿಗಾ
ಗೆದೆಯೊಳಗುಕ್ಕುವ ಅಕ್ಕರೆಯಿಂದಾ
ಕಿರಿಯರ ಕೆಚ್ಚಿಗೆ ಅಚ್ಚರಿಗೊಂಡು,
ಬರುವರು, ತಿಳಿವರು, ಶಾಭಾಸೆಂಬರು,
ನುಗ್ಗಿರಿ, ಹೆಗ್ಗುರಿ ಬಿಡಬೇಡೆಂಬರು.

ಇಬ್ಬರೂ ಸೇರಿ :

ಅವರಿಗೆ ದೇವರು ವರಗಳ ನೀಡಲಿ !
ಕ್ರಾಸ್‌ವರ್ಡ್ ಪಸಲಲಿ ಪ್ರೈಸನು ಕೊಡಲಿ !
ಕನ್ನಡ ನಾಡಲಿ ಕಲಿಗಳು ನಲಿಯಲಿ,
ಕನ್ನಡ ಮಾತೆಗೆ ಜಯ ಜಯವಾಗಲಿ.

——.·.——

# ಗ್ರಂಥ ಸಮರ್ಪಣ

ಪ್ರಾಚೀನ ಪಂಡಿತರಂತೆ, ಆಧುನಿಕ ಗ್ರಂಥಕರ್ತರೂ, ತಮ್ಮ ಮೆದುಳಿಗೆ ತಿರುಳನ್ನೂ ಚುರುಕನ್ನೂ ದಯಪಾಲಿಸಿದ ಪುಣ್ಯಾತ್ಮರ ಹೆಸರನ್ನು ಪ್ರಾರಂಭ ದಲ್ಲೇ ಸೂಚಿಸಿ, ಅವರಿಗೆ ತಮ್ಮ ಗ್ರಂಥವನ್ನು ಅರ್ಪಣ ಮಾಡುವುದುಂಟು. ಈ ಪದ್ಧತಿಯನ್ನು ಎಲ್ಲರೂ ಅನುಸರಿಸುತ್ತಿರುವುದರಿಂದ, ಅದನ್ನು ಹೊಸ ಹೊಸ ರೀತಿಯಲ್ಲಿ ನೆರವೇರಿಸಲು ಅವಕಾಶ ಕಡಿಮೆಯಾಗುತ್ತಿದೆ. ನಮಗೆ ತೀರ ಹತ್ತಿರದವರಿಗೆ ಗ್ರಂಥವನ್ನು ಸಮರ್ಪಣ ಮಾಡುವಾಗ, ಅದನ್ನು ಓದಿ ತಿಳಿದುಕೊಳ್ಳಲು ಶಕ್ತಿಯಿಲ್ಲದವರಿಗೆ ಅರ್ಪಿಸುವುದೇ ಮೇಲು. ಸಾಧಾರಣ ವಾಗಿ, "ಅಮ್ಮನಿಗೆ", "ಕಿಟ್ಟುವಿಗೆ" ಎಂದು ಮೊದಲನೆಯ ಪುಟದ ಮಧ್ಯ ಭಾಗದಲ್ಲಿ ಅಚ್ಚು ಹಾಕಿಸುವುದೇ ವಾಡಿಕೆಯಾಗಿದೆ. ಕೆಲವರು ಅಮ್ಮನವರಿಗೆ ಅರ್ಪಿಸುವುದೂ ಉಂಟು. ಆಗ, "ನನ್ನ **ಪತ್ನಿ**ಗೆ" ಎಂದು ಅವರು ಚಮತ್ಕಾರವಾಗಿ ಮೊಳೆಗಳನ್ನು ಜೋಡಿಸಿರುವುದರಿಂದಲೇ, ಸತಿಪತಿ ಯರ ಜೀವನ ಸುಖವನ್ನು ನಾವು ಅರಿತುಕೊಳ್ಳಬಹುದಾಗಿದೆ.

ಕೆಲವರು "ಸಾಹುಕಾರ್ ಚಿಕ್ಕ ಜೋರಯ್ಯನವರಿಗೆ", "ಅರಕಲ ಗೂಡು ಅನಂತರಾಮಯ್ಯನವರಿಗೆ" ಎಂದು, ತಮಗೆ ಗ್ರಂಥ ಪ್ರಕಟಣೆಗಾಗಿ ಸಾಲವನ್ನೊದಗಿಸಿದ ಶ್ರೀಮಂತರನ್ನು ನೆನೆದುಕೊಳ್ಳುತ್ತಾರೆ. ಆದರೆ, ಇದು ವರೆಗೆ ಯಾರೂ, "ಕೃಷ್ಣರಾಜಪುರಂ ಕೋ-ಆಪರೇಟಿವ್ ಬ್ಯಾಂಕಿಗೆ" ಎಂದು ಅಚ್ಚು ಹಾಕಿಸಿರುವಹಾಗೆ ಕಾಣಿಸುವುದಿಲ್ಲ. ಇದು ಕೃತಘ್ನತೆಯಲ್ಲದೆ, ಮತ್ತೇನು? ಆದರೆ, ಅಂತಹ ಬ್ಯಾಂಕುಗಳು "ಸಮರ್ಪಣದ"ದ ಉಪಾ ಯಕ್ಕೆ ಮನಸೋತು, ಸಾಲವನ್ನು ಸಹಾಯ ಧನವೆಂದು ಪರಿಗಣಿಸಲು ಮುಂದೆ ಬರದಿರುವುದೇ ಈ ಕೃತಘ್ನತೆಯ ಕಾರಣವಿರಬಹುದಲ್ಲವೆ?

"ಭಯಕೃತ್ ಭಯನಾಶಕ"ರಾಗಿರುವ ಅಧಿಕಾರಿಗಳಿಗೆ "ಸಮರ್ಪಣ" ಮಾಡುವಾಗ, ಈ ಕೆಳಗಣ ಉದಾಹರಣೆಯನ್ನು ಅನುಸರಿಸುವುದು ಉತ್ತಮ.

ಈ ಅಲ್ಪ ಗ್ರಂಥವನ್ನು
........ಇಲಾಖೆಯ ಮುಖ್ಯಾಧಿಕಾರಿಯಾಗಿದ್ದುಕೊಂಡು
ಇತೋಪ್ಯತಿಶಯವಾಗಿ ದುಡಿ
ದ, ಯುತ್ತಿರುವ, ಮತ್ತು ಯುವ
ದಿವಾ೯ ಬಹದ್ದೂರ್ ರಾಜಕುಂಟೆ ಶ್ರೀನಿವಾಸಾಚಾರ್ಯರಿಗೆ
ಭಕ್ತಿ ಪುರಸ್ಸರವಾಗಿ ಅರ್ಪಿಸಿದ್ದೇನೆ.

ಪ್ರಯಾಗ ಪ್ರಥಮ ಏಕಾದಶಿ

ಇಂತಹ "ಸಮರ್ಪಣ" ವನ್ನು ಓದುವಾಗ, ಅಷ್ಟು ದೊಡ್ಡ ಅಧಿಕಾರಿಗಳ ಅಡಿದಾವರೆಯಲ್ಲಿ ಒಂದು ಪುಷ್ಪವನ್ನರ್ಪಿಸಲು ತಮ್ಮಿಂದ ಸಾಧ್ಯವಾಗಲಿಲ್ಲವಲ್ಲಾ ಎಂದು ವಾಚಕರು ಕೊರಗುತ್ತಾರೆ, ಅವರಿಗೆ ಕಣ್ಣು ಬೇಸ ಬರುತ್ತದೆ ...ಅಲ್ಲದೆ, "ಪ್ರಯಾಗ" ಎಂಬುದನ್ನು ನೋಡಿದಾಗ, ಆಚಾರ್ಯರು ಹಿಗ್ಗಿ ಹಿರಿದಾಗುವರು. "ರಾಮೇಶ್ವರಕ್ಕೆ ಹೋದರೂ, ಶನೀಶ್ವರ ಬಿಡಲಿಲ್ಲ" ಎಂದಹಾಗೆ, ಎಷ್ಟು ದೂರದಲ್ಲಿದ್ದರೂ, ಎಂತಹ ಪುಣ್ಯಕ್ಷೇತ್ರದಲ್ಲಿ, ಎಂತಹ ಪವಿತ್ರವಾದ ಸನ್ನಿವೇಶದಲ್ಲೂ, ಪ್ರಾಣಿ, ನನ್ನನ್ನೇ ನೆನೆಯುತ್ತಿರುವನಲ್ಲಾ, ಇವನೇ ನಿಜವಾದ ಭಕ್ತ ಎಂದು ಅವರು ಗ್ರಂಥಕರ್ತನನ್ನು ಮೆಚ್ಚದಿರಲಾರರು. ಮತ್ತೊಂದು ವಿಷಯ: "ಪ್ರಯಾಗ" ವನ್ನು ನೆನೆದಾಗ, ಗಂಗೆ ಯಮುನೆಯರ ಸಂಗಮದಲ್ಲಿ ಮಿಂದು ಮುಕ್ತರಾಗಬೇಕೆಂಬ ಹಂಬಲವು ಬರಿಯ ಕನಸು ಮಾತ್ರವಾಗಿರುವ ಸಾವಿರಾರು ಕನ್ನಡಿಗರು, ಗ್ರಂಥಕರ್ತನು ಅಲ್ಲಿ ಹೋಗಿರುವುದನ್ನರಿತು, "ಆಹಾ! ಇವನು ಎಂತಹ ನಿಷ್ಠ, ಪುಣ್ಯಶಾಲಿ, ಶೀಲವಂತ" ಎಂದು ಕೊಂಡಾಡದೆ ಇರರು. ಆದ್ದರಿಂದ, 'ಹರಿಹರ' ದಾಟದ ಬಡ ಬರವಣಿಗೆಗಾರನೂ ಕೂಡ, ಗ್ರಂಥಾರಂಭದಲ್ಲಿ, "ಉಜ್ಜಯಿನಿ" "ಉತ್ತರ ಕಾಶಿ", "ಬದರಿನಾಥ" ಎಂಬ ವಿಳಾಸಗಳಲ್ಲೊಂದನ್ನು ಸೂಚಿಸುವುದು ಬುದ್ಧಿವಂತಿಕೆಯ ಲಕ್ಷಣ. ಹಾಗೆಯೇ, ಮೇಲಿನ ಉದಾಹರಣೆಯಲ್ಲಿ "ಪ್ರಥಮ ಏಕಾದಶಿ" ಎಂಬ ಮಾತನ್ನು ಗಮನಿಸಿ. ಅದರಲ್ಲಡಕವಾಗಿರುವ "ಉಪವಾಸ" ದ ಗೋಳು ಎಂತಹ ಕಲ್ಲೆದೆಯನ್ನೂ ಕರಗಿಸಬಲ್ಲದು.

ಕಡೆಯದಾಗಿ, ಒಂದು ಮಾತು. "ಸಮರ್ಪಣ"ದ ವಿಧಾನಗಳಲ್ಲಿ ಆಂಗ್ಲೇಯರ ಒಂದು ಪದ್ಧತಿಯನ್ನು ನಾವು ಕನ್ನಡಕ್ಕೆ ತಂದುಕೊಳ್ಳಬಹುದು. "ದ. ನಾ. ಗೆ." ಎಂದು ಮಾತ್ರ ಅಚ್ಚು ಹಾಕಿಸಿಬಿಡುವುದು. ಆಗ, "ದ. ನಾ." ಅಂದರೆ, "ದರಿದ್ರ ನಾರಾಯಣ" ಎಂಬುದನ್ನು ತಿಳಿದುಕೊಳ್ಳದೆ, **ದ**ಮ್ಮಯ್ಯನಪುರ, **ದ**ಣಿದಹಳ್ಳಿ, **ದ**ಡಾರದ ಹುಂಡಿ ಮುಂತಾದ ಊರುಗಳಲ್ಲಿರುವ **ನಾ**ರಾಯಣ, **ನಾ**ಗರಾಜ, **ನಾ**ಮಗಿರಿ, ಗಳು, ತಮಗೆ ಅದನ್ನು ಹೊಂದಿಸಿಕೊಂಡು, ಒಂದು ವೇಳೆ ಪುಸ್ತಕವನ್ನು ಓದಿದರೂ ಓದಬಹುದು; ಹಲಕೆಲವರು ಪ್ರತಿಗಳನ್ನು ಕಾಸು ಕೊಟ್ಟು, ಕೊಂಡುಕೊಳ್ಳುವ ಸಂಭವವೂ ಉಂಟು. ಆದರೆ, ಅವರಿಗೆ ಒಂದು ಚಿಕ್ಕ ಅನುಕೂಲವನ್ನು ಗ್ರಂಥಕರ್ತನು ಮಾಡಿಕೊಡಲೇಬೇಕು. ತಮ್ಮ ಹೆಸರನ್ನು ಅವರು ಅಲ್ಲಿ ಬರೆದಿಟ್ಟುಕೊಳ್ಳುವಹಾಗೆ, ಅಚ್ಚಿನ ಮೊಳೆಗಳನ್ನು ದೂರದೂರ ಜೋಡಿಸಬೇಕು: "ದ ನಾ ಗೆ" ಎಂದು.



# ಗುಂಡನ ಗಾದೆಗಳು

ಹಣೆಯ ಬರಹವನ್ನು ಅಳಿಸಲು ಸಾಧ್ಯವಿಲ್ಲ, ಅಂತಾರಲ್ಲ! ಶುದ್ಧ ಸುಳ್ಳು! ಈಗ ತಾನೆ, ನಾಲ್ಕು ಘಂಟೆಗೆ ಸರಿಯಾಗಿ, ಗುಂಡನನ್ನ ಕಟ್ಟಿಕೊಂಡು ಅಳಬೇಕಾಗಿ ನನ್ನ ಹಣೆಯಲ್ಲಿದ್ದ ಬರಹವನ್ನು, ತೊಡೆದುಹಾಕಿದೆ, ನಾನು; ಭೂಪ! ಅದು ಹೇಗೆ, ಅಂತೀರೋ? ಹೇಳುತ್ತೇನೆ—

ಗುಂಡನಿಗೂ ನನಗೂ ಸ್ನೇಹವಾದದ್ದು ಯಾವ ಹೊತ್ತೋ ಏನೋ, ಮರೆತುಹೋಗಿದೆ. ಹೇಗೋ ಸೇರಿಕೊಂಡುಬಿಟ್ಟ, ತೋಳಿಗೆ ತೋಳು, ಗಳಸ್ಯ, ಕಂಠಸ್ಯ, ಅಂತಾರಲ್ಲಾ, ಹಾಗೆ. ಎಷ್ಟು ಸಲ ನಾನು "ಯತ್ತೇ ಯಜ್ಞೇ" ಅಂತ ಅವನನ್ನು ಕೊಡವಿ ಓಡಿಸಿದರೂ, "ಪುನರಾರ್ಯ ಮಹಾ ಕಪಿಃ" ಹುಡುಗ ಅಪರಂಜಿ, ಅನ್ನಿ. ಧಾರಾಳಿ, ಧಾಂಡಿಗ, ಧೀರ: ಆದರೆ, ಕವಿಗಳು ಹೇಳುವಹಾಗೆ ಗುಂಡನೆಂಬ ಚಂದ್ರಬಿಂಬದಲ್ಲಿ ಒಂದು ಶಶಿಶಿಶುವು ಸೇರಿಕೊಂಡಿತ್ತು: ಅಂದರೆ, ಈ ದುರ್ಗುಣವು ಹುಟ್ಟಿದಾಗಲೇ ಅವನ ಬೆನ್ನು ಹತ್ತಿದ್ದಲ್ಲ; ಅನಂತರ ವಕ್ರಿಸಿದ್ದು ಅನ್ನಿ, ಹಾಲಿಗೆ ಹುಳಿ ಬಿದ್ದಹಾಗೆ; ಕಾಫಿಗೆ ನೊಣ ಬಿದ್ದಹಾಗೆ; ಅಷ್ಟೆ. ಆ ದುರ್ಗುಣವು ಅವನಲ್ಲಿ ಬಂದು ಸೇರಿದ ಘಳಿಗೆಯನ್ನು ಕೂಡ ನಾನು ಗುರುತಿಸಬಲ್ಲೆ. ಮೊನ್ನೆ ಜನವರಿ, ಹದಿಮೂರನೆಯ ತಾರೀಖು, ಗುರುವಾರ, ಸಾಯಂಕಾಲ ೫-೩೦ರಿಂದ ಹಿಡಿದು ೫-೪೫ರ ಒಳಗೆ!

ನಾನೂ ಅವನೂ ಆ ದಿನ, ಗ್ರಹಚಾರವಶಾತ್, ಟೌನ್‌ಹಾಲಿನ ಕಡೆ ವಾಕಿಂಗ್ ಹೋದೆವು. ಆ ಮೈದಾನದಲ್ಲಿ ಹುರಿಗಾಳು ತಿನ್ನುತ್ತಾ ಹೊರಳಾಡುತ್ತಿದ್ದಾಗ, ಮಳೆ ಬಂತು. ವಿಧಿಯಿಲ್ಲ. ಸಭಾಮಂದಿರಕ್ಕೆ ನುಗ್ಗಿದೆವು. ಅಲ್ಲೊಬ್ಬರು ವೇದಿಕೆಯ ಮೇಲೆ ನಿಂತು, ಕೈಗಳನ್ನು ಬೀಸುತ್ತಾ, ರಭಸದಿಂದ ಉಪನ್ಯಾಸ ಮಾಡುತ್ತಿದ್ದರು. "ಪರಮಾತ್ಮಾ! ನಿನ್ನ ಲೀಲೆ, ಇವತ್ತು ಹೀಗಾಯಿತೆ?" ಎಂದು ಹೇಳಿ, ಖಾಲಿ ಬಿದ್ದಿದ್ದ ಕುರ್ಚಿಗಳಲ್ಲಿ ನಾವು ಕುಕ್ಕ

ರಿಸಿನೆವು, "ಬಂದದ್ದೆಲ್ಲಾ ಬರಲಿ, ಗೋವಿಂದನ ದಯೆ ಒಂದಿರಲಿ" ಅಂತ. ಉಪನ್ಯಾಸಕ, ಪಾಪ, ಯಥಾಪ್ರಕಾರ, "ಭಾರತಾಂಬೆ", "ಕನ್ನಡಮಾತೆ" ಅಂತ ಮೊದಲುಮಾಡಿ "ವಾತಾವರಣ" ದಾಟಿ "ಚಳುವಳಿ"ಗೆ ಬಂದ. ನನಗೆ ಕೊಂಚ ತೂಕಡಿಕೆ ಬಂತು. ಗುಂಡನಿಗೆ ಮಾತ್ರ ಎಂದೂ ಇಲ್ಲದ ಸಡಗರ, ಉತ್ಸಾಹ; ಆಗಾಗ ನೆಟ್ಟಗೆ ಕುಳಿತು, ಕಿವಿಯನ್ನು ವೇದಿಕೆಯ ಕಡೆಗೆ ತಿರುಗಿಸಿ ಹಿಡಿದನು. ಒಂದೆರಡು ಸಲ ಕೊಂಚ ಗಟ್ಟಿಯಾಗಿಯೇ ನಕ್ಕನು. ಉಪನ್ಯಾಸಕ ಹೇಳುತ್ತಿದ್ದ ಅನೇಕ ಗಾದೆಗಳಿಗೆ ಕಿವಿದೂಗಿದನು. ಅವುಗಳಲ್ಲಿ ಎರಡು ಜಾಣ್ನುಡಿಗಳು ಗುಂಡನ ಮನಸ್ಸನ್ನು ಅಪಹರಿಸಿದವು. ಜೇಡಿ ಮಣ್ಣಿನಂತಿದ್ದ ಅವನ ಮೆದುಳಿನಲ್ಲಿ ಅವು ಅಚ್ಚಳಿಯದಂತೆ ತಮ್ಮ ಮುದ್ರೆಯನ್ನೊತ್ತಿದವು.

ಅಂದಿನಿಂದ, ಸಮಯ ಸಿಕ್ಕಿದಾಗಲೆಲ್ಲಾ, ಗುಂಡ ಆ ಎರಡು ಗಾದೆಗಳನ್ನೂ ಉಪಯೋಗಿಸತೊಡಗಿದ. ಮೊದಮೊದಲು, ಸರಿಯಾದ ಸನ್ನಿವೇಶಗಳಲ್ಲಿ ಮಾತ್ರ ಅವುಗಳನ್ನು ಪ್ರಯೋಗಿಸುತ್ತಿದ್ದ; ಕಡೆಗೆ ಅವನ ಅಭಿಮಾನವು ಎಷ್ಟು ಬಲಗೊಂಡಿತು ಎಂದರೆ, ಸನ್ನಿವೇಶಗಳನ್ನು ಸಿದ್ಧ ಮಾಡಿಕೊಂಡಾದರೂ, ದಿನಕ್ಕೆ ಹತ್ತಿಪ್ಪತ್ತು ಸಲ ಆ ಎರಡು ಗಾದೆಗಳನ್ನು ಹೇಳದೆ ಹೋದರೆ ಗುಂಡನಿಗೆ ಅಸಮಾಧಾನ. ಮೊದಲನೆಯ ಒಂದೆರಡು ಸಾರಿ, ನಾನು ಗುಂಡನ ಬುದ್ಧಿ ಚಾತುರ್ಯಕ್ಕೆ ಮೆಚ್ಚಿದೆ. ಆದರೆ, ಬರಬರುತ್ತಾ ಎಂತಹ ಭಯಂಕರವಾದ ಚಾಳಿಗೆ ಅವನು ಸಿಕ್ಕಿ ನರಳುತ್ತಿರುವನು ಎಂದು ತಿಳಿದು, ನಾನು ಅವನ ಪೆದ್ದವಂತಿಕೆಗೆ ತುಂಬಾ ಮರುಗಿದೆ. ಗುಂಡನ ದುರಭ್ಯಾಸವನ್ನು ಒಂದು ಉದಾಹರಣೆಯಿಂದ ನಿಮಗೆ ವಿಶದಪಡಿಸುತ್ತೇನೆ.

ಆದಿನ ನಮ್ಮನ್ನು ಅನಂತ ಕೃಷ್ಣಯ್ಯಂಗಾರಿ ಕಬಳಕ್ಕೆ ಕರೆಸಿದ್ದ. ಇನ್ನೂ ಯಾರಾರೋ ಬಂದಿದ್ದರು. ಸಾರು ಬರುವ ಹೊತ್ತು. ಇದುವರೆಗೂ ಸಭ್ಯನಾಗಿಯೇ ಇದ್ದ ಗುಂಡ, ಮೆಲ್ಲಗೆ ಎಲೆ ಪಕ್ಕದಲ್ಲಿದ್ದ ಬೆಳ್ಳಿ ಬಟ್ಟಲನ್ನು ಮೇಲಕ್ಕೆ ಎತ್ತಿ ನೋಡಿದ. ಬೆಳ್ಳಿ ಮುಲಾಮು ಹಚ್ಚಿದ ಹಿತ್ತಾಳೆ ಬಟ್ಟಲು, ಅಂತ ಪತ್ತೆ ಆಯಿತು. ಸುಮ್ಮನಿರಬಾರದೆ? ಆಗುವದಿಲ್ಲ. ಆ ಹಾಳು ಗಾದೆಗಳಲ್ಲಿ ಒಂದನ್ನು ಎಲ್ಲರೆದುರು ಉಪಯೋಗಿಸಲು ಅವಕಾಶ ಸಿಕ್ಕಿರುವಾಗ

ಸುಮ್ಮನಿರುವುದು ಹೇಗೆ ಸಾಧ್ಯ ಅವನಿಗೆ? ಪಾಪ! ಮಾನ, ಮರ್ಯಾದೆ, ಎಲ್ಲವನ್ನೂ ಬಿಟ್ಟು ಆ ಎರಡು ಗಾದೆಗಳ ಮೇಲೆ ನಿಂತಿದೆ ಗುಂಡನ ಪ್ರಾಣ. ಏನು ಮಾಡುತ್ತಾನೆ? ಗಂಟಲನ್ನು ಸರಿಪಡಿಸಿಕ್ಕೊಂಡ. ಅವನು ಯಾವ ಗಾದೆ ಹೇಳುತ್ತಾನೆ ಅಂತ ನನಗೆ ಗೊತ್ತೇ ಇತ್ತು. ಆ ದಿನ ಆ ಉಪನ್ಯಾಸಕ ಟೌನ್‌ಹಾಲಿನಲ್ಲಿ ಹೇಳಿದ್ದರ ಪೈಕಿ ಮೊದಲನೆಯದನ್ನು ಅಂದೇಬಿಟ್ಟ ಪುಣ್ಯಾತ್ಮ! "ಲೋ! ಅನಂತೂ! ಏನಯ್ಯಾ ಇದು ಮುಲಾಮಿನ ಸಮಾಚಾರ! ಹಷ್ಟು! ಎಲ್ಲರ ಮನೆ ದೋಸೆಯೂ ತೂತು" ಅಂದ. ಗುಂಡನ ನಾಲಿಗೆಯ ನವೆ ಅರ್ಧ ತೀರಿದಹಾಗಾಯಿತು. ಆದರೆ, ಇನ್ನೊಂದು ಗಾದೆಯನ್ನೂ ಹೇಳದೆ ಅವನು ಏಳುವುದಿಲ್ಲವೆಂದು ನನಗೆ ಗೊತ್ತು. ಅವನ ಗತಿ ಅಷ್ಟು ವಿಷಮ್ಯ ಕ್ಕಿಟ್ಟುಕೊಂಡುಬಿಟ್ಟಿತ್ತು. ಖೀರು ಮೊದಲನೆಯ ಸಲ ಬಂತು. ಯಾರೋ ಒಬ್ಬರು 'ಚಟ್ನಿ' ಅಂದರು. ಆಗ ಶಾಮು, "ಇದೇನಯ್ಯಾ, ನನ್ನ ಎಲೆಗೆ ಎರಡು ದೊನ್ನೆ ಹಾಕಿದ್ದೀರಾ?" ಅಂದ. ಇಂತಹದೊಂದು ಘಟನೆಯನ್ನೇ ಕಾಯುತ್ತಿದ್ದ ಗುಂಡ, ಥಟಕ್ಕನೆ "ಅದಕ್ಕೇ ಕಣಯ್ಯಾ, ಹೇಳುವುದು, ಚಮತ್ಕಾರವಿದ್ದರೆ ನಮಸ್ಕಾರ, ಅಂತ" ಎಂದು ಹೇಳಿ, ಶಾಂತನಾದ. ಇನ್ನು ಮೇಲಾದರೂ ಎರಡು ಮೂರು ಗಂಟೆಗಳ ಕಾಲ ಗುಂಡ ಹಸನ್ಮುಖನಾಗಿಯೇ ಇರುತ್ತಾನೆ. ಅನಂತರ, ಆ ಎರಡು ಗಾದೆಗಳನ್ನೂ ಮತ್ತೊಂದು ಸಾರಿ ಉಪಯೋಗಿಸದೆ ಹೋದರೆ, ಅವನಿಗೆ ಹುಚ್ಚು ಹಿಡಿದಂತಾಗುತ್ತದೆ; ಹತ್ತಿರ ಇರುವವರನ್ನು ಪರಚಿದರೂ ಪರಚಿದ!

ನೋಡಿ, ಆ ದಿನ ಬೆಳಗ್ಗೆ, ಎಲ್ಲರ ಮನೆ ದೋಸೆಯೂ ತೂತು, ಎಂಬ ಮಹಾ ವಾಕ್ಯವನ್ನು ಕೆಂಪರಾಜೆ ಅರಸು ಕಾಫಿ ಕೊಡಿಸಿದಾಗ ಹೇಳಿದ್ದ; ಟಾಂಗಾದವನು ಬಾಡಿಗೆ ಸಾಲದು ಎಂದು ತಕರಾರು ತೆಗೆದಾಗ ಅವನಿಗೂ ಹೇಳಿದ್ದ; ನೂರಡಿ ರಸ್ತೆಯಲ್ಲಿ ನಾಯಿಮರಿ ಸತ್ತು ಬಿದ್ದಿದ್ದನ್ನು ನೋಡಿದಾಗ ಹೇಳಿದ್ದ. ಇನ್ನೊಂದನ್ನೂ ಹಾಗೆಯೇ, ಅಬದ್ಧಂವಾ ಸಬದ್ಧಂವಾ, ಚಮತ್ಕಾರ ವಿದ್ದರೆ ನಮಸ್ಕಾರ, ಅಂತ ಇಪ್ಪತ್ತು ಇಪ್ಪತ್ತೈದು ಸಲ ಹೊಡೆದೇಬಿಟ್ಟಿದ್ದ.

ಉಳಿದವರಿಗೆಲ್ಲರಿಗೂ ಈ ಗಾದೆಗಳ ಪೆಟ್ಟು ಒಂದೊಂದು ಸಲವಾದರೆ, ನನ್ನ ಹಣೆ ಬರಹ ನೋಡಿ, ದಿನಬೆಳಗಾದರೆ ನೂರಿನ್ನೂರು ಸಲ, ಎಲ್ಲಿ

ಗಾದರೂ ದೇಶಾಂತರ ಹೋಗೋಣವೆಂದರೆ, ಕಾಸಿಗೆ ಗತಿಯಿಲ್ಲ; ಗುಂಡ ನೊಂದಿಗೆ ಜಗಳವಾಡಿ ಜೀವ ಉಳಿಸಿಕೊಳ್ಳೋಣವೆಂದರೆ, ಅವನಿಗೆ ಕೋಪದ ಕಾವು ಏರುವುದೇ ಇಲ್ಲ. "ಲೋ, ಗುಂಡ, ಗುಂಡ ಅದನ್ನು ಹೇಳಬೇಡ ಕಣೋ, ಎಲ್ಲರೂ ನಿನ್ನನ್ನು ನೋಡಿ ನಗುತ್ತಾರೆ" ಅಂದರೆ, "ಹೋಗೋ! ಕಂಡಿದ್ದೇನೆ! ಎಲ್ಲರ ಮನೆ ದೋಸೆಯೂ ತೂತು. ಈಗಿನ ಕಾಲದಲ್ಲಿ, ನೋಡು, ಚಮತ್ಕಾರವಿದ್ದರೆ ನಮಸ್ಕಾರ!" ಎಂದು ಎರಡನ್ನೂ ಸೇರಿಸಿ ನನ್ನ ಮೇಲೆ ಬಾಣಪ್ರಯೋಗ ಮಾಡಿಬಿಡುತ್ತಾನೆ. ಗುಂಡನ ಮನಸ್ಸು ಬೇರೆ ಕಡೆ ತಿರುಗಲಿ ಅಂತ ಅವನಿಗೆ ಈಜು ಕಲಿಸಿದೆ; ಇಸ್ಪೀಟು ಹೇಳಿಕೊಟ್ಟೆ; ಗರಡಿಗೆ ಸೇರಿಸಿದೆ, ಕವನಗಳನ್ನು ಕಟ್ಟೋ ಎಂದೆ; ಅವನಿಗೆ ಗಾಂಪರೊಡೆಯರ ಕತೆ ಹೇಳಿದೆ; ಚಕ್ರಬಂಧ ಸ್ಪರ್ಧೆಯಲ್ಲಿ ಆಶೆ ಹುಟ್ಟಿಸಿದೆ. ಬಹುಮಾನ ಬರದೆ ಇದ್ದಾಗ, "ಎಲ್ಲರ ಮನೆ ದೋಸೆಯೂ ತೂತು", ಬೇರೆ ಯಾರಿಗಾದರೂ ಬಂದದ್ದು ಕೇಳಿದರೆ, "ಚಮತ್ಕಾರವಿದ್ದರೆ, ನಮಸ್ಕಾರ!"–ಏನು ಮಾಡೋಣ?

ಕಡೆಗೆ, ಮೊನ್ನೆ ಗುಂಡನನ್ನ ಆಸ್ಪತ್ರೆಗೆ ಕರೆದುಕೊಂಡು ಹೋದೆ, ವಿಧಿಯಿಲ್ಲ. ಗಾಡಿಯಲ್ಲೇ ಹದಿನಾಲ್ಕು ಸಲ ಆಯಿತು. ಶೀಷೆಗಳನ್ನು ಹಿಡಿದು ಕೆಲವರು ಅದೇ ದಾರಿಯಲ್ಲಿ ಹೋಗುತ್ತಿರುವುದನ್ನು ನೋಡಿ, ದೋಸೆಯ ವಿಷಯ ಹೇಳಿದ. ಡಾಕ್ಟರು ಹಾಕಿದ್ದ ಸೂಟನ್ನು ನೋಡಿ, "ಚಮತ್ಕಾರ .......ಸ್ಕಾರ" ಅಂದ. ಆ ಡಾಕ್ಟರು, ಬುದ್ಧಿವಂತರು, ಒಂದು ಕಾಗದ ಬರೆದುಕೊಟ್ಟು, ಆದಷ್ಟು ಬೇಗ ಬೆಂಗಳೂರಿನಲ್ಲಿ ಇಂತಹವರಿಗಾಗಿಯೇ ಇರುವ ಒಂದು ಆಸ್ಪತ್ರೆಗೆ ರವಾನಿಸಿಬಿಡಿ ಅಂತ ಹೇಳಿದರು .......

ಕಡೆಗೂ, ನೋಡಿ, ಗುಂಡ ಜಗ್ಗಲಿಲ್ಲವಲ್ಲಾ! ರೈಲು ಹೊರಡುವಾಗ, "ಬಿಡೋ, ಬಿಡೋ, ಚಮತ್ಕಾರವಿದ್ದರೆ ನಮಸ್ಕಾರ! ಎಲ್ಲರ ಮನೆ ದೋಸೆಯೂ ತೂತು" ಅಂತ ಹೇಳಿ, ರೈಲು ಹೊರಡುತ್ತಲೂ ಚಕ್ರದ ತಾಳಕ್ಕೆ ಸರಿಯಾಗಿ, ಚಮತ್ಕಾರ, ನಮಸ್ಕಾರ, ಚಮತ್ಕಾರ, ನಮಸ್ಕಾರ, ಅಂತ ಹೇಳುತ್ತಲೇ, ಹೋದ .......ಪಾಪ!



# ಚುಕ್ಕಿಗಳು

ಚುಕ್ಕಿಗಳಿಂದ ಆಧುನಿಕ ಕನ್ನಡ ಸಾಹಿತ್ಯಕ್ಕೆ ಆಗಿರುವ, ಆಗುತ್ತಲಿರುವ, ಮತ್ತು ಆಗಬಹುದಾದ, ಉಪಕಾರವನ್ನು ಅಷ್ಟಿಷ್ಟೆಂದು ಅಳೆಯಲು ಸಾಧ್ಯವಿಲ್ಲ. ಇಪ್ಪತ್ತನೆಯ ಶತಮಾನದ ಕನ್ನಡ ಬರಹಗಾರರ ಸಾಲದ ವಿಷಯವಾಗಿ ಮುಂದೆ ಒಂದು ದೊಡ್ಡ ಗ್ರಂಥವನ್ನೇ ಯಾರಾದರೂ ಸಂಶೋಧಕರು ಬರೆದಾರು. ಆಗ ಗಗನ ಚುಕ್ಕಿ, ಗಗನದ ಚುಕ್ಕಿ, ಇವುಗಳ ಮಾತು ಹಾಗಿರಲಿ, ಬರೀ × × × ಇವುಗಳೂ ಕೂಡ, ಗದ್ಯ, ಪದ್ಯ, ಗಪದ್ಯ (ಅಂದರೆ ಗದ್ಯ ಪ್ರಧಾನವಾದ ಪದ್ಯ), ಪಗದ್ಯ (ಪದ್ಯ ಪ್ರಧಾನವಾದ ಗದ್ಯ) ಗಳಲ್ಲಿ ಗ್ರಂಥಕರ್ತರಿಗೆ ಹೆಚ್ಚು ನೆರವಾಗಿವೆ ಎಂದು ಹೇಳಬೇಕಾಗುವುದು.

ವಿಚಾರ ಮಾಡಿದರೆ, ಪಡುವಲಿಂದ ಬಂದ ಬೆಳಕಿನ ಒಂದು ಮುಖ್ಯ ಭಾಗ, ಈ ಚುಕ್ಕಿಗಳಿಂದಲೇ ಬಂದಿವೆ ಎನ್ನಬಹುದು. ಅವು ಭಾವದ ಏರಿಳಿತವನ್ನೂ ಜನ್ಮ ಪುನರ್ಜನ್ಮವನ್ನೂ ಸುಲಭವಾಗಿ ತಿಳಿಸುತ್ತವೆ.

ಉದಾಹರಣೆಗೆ—

೧. ನಿಲ್ಲಿಸೋ, ನೇತಿ, ನೇತಿ

× × ×

ಏತಿ ಅಂದರೆ ಪ್ರೇತಿ !

೨. ಒಂಟಿಯ ಸೊಂಟವ ಮುರಿಯೋ ಬೇಗ !

× × ×

ಒಗಟೆ ಟಮುಟೆಯನು ಬಡಿಯಿರಿ ಬೇಗ !

೩. ಅಲ್ಲಿ, ನುಗ್ಗು, ನುಗ್ಗು !

× × ×

ಬಲ್ಲೆ, ಹಿಗ್ಗು, ತಗ್ಗು !

ಇತ್ಯಾದಿ........

ಅಲ್ಲದೆ, ಅಸಹ್ಯವಾದ, ಭಯಾನಕವಾದ, ವಾಚಕ ಮಹಾಶಯರಿಗೆ ಹೇಳಬಾರದಂತಹ ಸನ್ನಿವೇಶಗಳನ್ನು ಚುಕ್ಕಿಗಳ ಕಿರುಮರೆಯಲ್ಲಿ ಅಡಗಿಸಿ, ಅವುಗಳ ಸ್ವರೂಪವನ್ನು ಸಂಪೂರ್ಣವಾಗಿ ಚಿತ್ರಿಸುವ ಭಾರವನ್ನು, ನಾವು ಓದುಗರಿಗೇ ಬಿಡಬಹುದಾಗಿದೆ.

ಉದಾಹರಣೆಗೆ—

೧. ರಾಮ ಯೂನಿವರ್ಸಿಟಿ ಆಫೀಸಿಗೆ ಹೋಗಿ, ಪರೀಕ್ಷೆಯ ಫಲಿತಾಂಶವನ್ನು × × × ನು.

೨. ಆ ಹೊಳೆಯ ದಡದಲ್ಲಿ × × × ತ್ತು.

೩. ಸೂರ್ಯೋದಯ! × × × ಬೆಟ್ಟದ ಸಾಲು! × × × ದನಕರುಗಳು! × × ×

ಇತ್ಯಾದಿ.

ಪುಸ್ತಕಗಳನ್ನು ಮಾರುವ ಜವಾಬ್ದಾರಿಯನ್ನು ಹೊತ್ತಿರುವವರು ಅವುಗಳ ವಿಷಯವಾಗಿ ಬಂದಿರತಕ್ಕ ವಿಮರ್ಶೆಗಳನ್ನು ಸಮಂಜಸವಾಗಿ ಉಪಯೋಗಿಸಿಕೊಳ್ಳುವುದರಲ್ಲಿ ಚುಕ್ಕಿಗಳಿಂದಾಗುತ್ತಿರುವ ಇನ್ನೊಂದು ಮಹದನುಗ್ರಹವನ್ನು ನಾವು ಕಾಣಬಹುದು.

ಉದಾಹರಣೆಗೆ—

**೧. ವಿಮರ್ಶೆ :** "ಇದೇ ರಾಮನಾಥ ವಿಜಯ ಎಂಬ ಕಾವ್ಯ ರತ್ನವನ್ನು ಶ್ರೀವರ್ಮ ಕಲ್ಲಿನಂಗಡಿಯವರು ಆರು ವರ್ಷಗಳ ಹಿಂದೆ ಸರ್ವೋತ್ಕೃಷ್ಟ ರೀತಿಯಲ್ಲಿ ಸಂಶೋಧಸೆ ನಡೆಸಿ, ಅಚ್ಚು ಹಾಕಿದಾರೆ. ಆದುದರಿಂದ, ಈಗ ಪ್ರತಿಯೊಂದು ಪುಟದಲ್ಲೂ ನೂರರ ಮೇಲೆ ತಪ್ಪುಗಳನ್ನು ಸೇರಿಸಿ, ಈ ರೀತಿಯಾಗಿ ಆ ಉದ್ಗ್ರಂಥಕ್ಕೆ ಕಳಂಕ ತಂದದ್ದರ ಉದ್ದೇಶವು ನಮಗೆ ತಿಳಿಯದಾಗಿದೆ." (ತಾಪತ್ರಯ—ತ್ರೈಮಾಸಿಕೆ, ಸಂಕಟ ೩—ಸಂಚಿಕೆ ೨.)

—ಪ್ರಕಾಶಕರು ಪ್ರಕಟಣೆಯಲ್ಲಿ ಹೇಳುವುದು : "× × × ಸರ್ವೋತ್ಕೃಷ್ಟವಾದ ರೀತಿಯಲ್ಲಿ ಸಂಶೋಧನೆ ನಡೆಸಿ, ಅಚ್ಚು ಹಾಕಿದಾರೆ × × ×"

೨. **ವಿಮರ್ಶೆ :** " ಈ ಗ್ರಂಥದಲ್ಲಿ ಕನ್ನಡ ನುಡಿಯ ಬೆಳೆವಣಿಗೆಗೆ ಸಂಬಂಧಿಸಿದ ಅನೇಕ ತೊಡಕುಗಳನ್ನು ಗ್ರಂಥಕರ್ತರು ಬಿಡಿಸಿದಾರೆ ಎಂದು ನಾವು ತಿಳಿದಿದ್ದೆವು. ಆದರೆ, ಪ್ರಕಾಶಕರ ಮತ್ತು ಗ್ರಂಥಕರ್ತರ ಶ್ರಮವೆಲ್ಲವೂ ಬೂದಿಯಲ್ಲಿ ಮಾಡಿದ ಹೋಮದಂತಾಗಿದೆ." (ಕರ್ಣಾಟಕ ಕರಟಕ ೧೯೩೬ನೆಯ ೧ + ೨ + ೩ + ೪ ಸಂಚಿಕೆ.)

—ಪ್ರಕಟಣೆ: " × × × ಈ ಗ್ರಂಥದಲ್ಲಿ ಕನ್ನಡ ನುಡಿಯ ಬೆಳೆವಣಿಗೆಗೆ ಸಂಬಂಧಿಸಿದ ಅನೇಕ ತೊಡಕುಗಳನ್ನು ಗ್ರಂಥಕರ್ತರು ಬಿಡಿಸಿದಾರೆ × × × "

ಆದರೆ ಚುಕ್ಕಿಗಳನ್ನು ತಮ್ಮ ನೆರವಿಗೆ ಒಲಿಸಿಕೊಳ್ಳುವವರೆಲ್ಲರೂ ಒಂದು ಸಂಗತಿಯನ್ನು ಮರೆಯಲೇಬಾರದು. ಬರಹಗಾರನು ಎಷ್ಟು ಕೃಪಣನಾದರೂ ಅವು ಮೂರಕ್ಕೆ ಕಡಿಮೆಯಾಗಬಾರದು; ಎಷ್ಟು ಉದಾರಿಯಾದರೂ, ಮೂರಕ್ಕಿಂತ ಹೆಚ್ಚು ಇರಬಾರದು. ಅವುಗಳನ್ನು × ×   × ಎಂದಾಗಲೀ, ×   × × ಎಂದಾಗಲಿ, × × × ಎಂದಾಗಲಿ, ×<sub>×</sub>× ಎಂದಾಗಲಿ, ×<sup>×</sup>× ಎಂದಾಗಲಿ ಅಚ್ಚು ಹಾಕಬಹುದು. ಆದರೆ ಒಟ್ಟು ಮೂರು ಚುಕ್ಕಿಗಳು ಇದ್ದೇ ಇರಬೇಕು. ಉದಾಹರಣೆಗೆ, " ಗುಂಡನ ಜೇಬಿನಲ್ಲಿ × × × × " ಚುಕ್ಕಿಗಳು (ಹೆಚ್ಚು), " ಅಯ್ಯೋ ಪುರೋಹಿತರು × × " ಚುಕ್ಕಿ (ಸಾಲದು) " ನಾನೊಬ್ಬನೇ ಅಷ್ಟನ್ನೂ  ×  ×  × "

(ಇದೀಗ ಸರಿ !)

# ಢುಂಕೀ

ನಿದ್ದೆಯ ಲೋಕದಿ, ಕನಸಿನ ಲೈಬ್ರರಿ
ತಿರುವಿದೆ, ನುಂಗಿದೆ, ಪುಟಗಳ ಮುರಿದು,
ನೋಟ್ಸನು ತೆಗೆದೆ, ಸಮ್ಮರಿ ಬರೆದೆ,
ಬರೆದೂ ಬರೆದೂ ಬರೆದೂ ಬರೆದೂ
ಬೆರಲನು ಸವೆದೆ, ಸೊಂಟವ ಮುರಿದೆ.
ಓದಿದೆ ಓದಿದೆ, ನಾಲಿಗೆ ತೂತು !
ಕೂಗಿದೆ ಕೂಗಿದೆ, ಕೂತೂ, ಕೂತು—
ಕಡೆಗೂ ಬಂದಿತು ಮಾರ್ಚಿ ತಿಂಗಳು,
ಬಿಸಿಲಿನ ಬೆವರಿನ ಮಾರಿಯ ತಿಂಗಳು !
ಕನಸಿನ ಘೋರ ಪರೀಕ್ಷೆಯಲಿ
ಡಿಗ್ರಿಯ ಪಡೆಯುವ ದೀಕ್ಷೆಯಲಿ,
ನುಗ್ಗಿದೆ ನಾನಾಹಾಲಿನಲಿ
ಹಿಗ್ಗಿನ ಗುರುತಿನ ಬಲಗಾಲಿನಲಿ !—
ಕಾಗದ ತುಂಬಾ ಬರೆದೆ, ಬರೆದೆ,
ನೀರನು ಕುಡಿದೆ, ಬುರುಡೆಯ ಕೆರೆದೆ,
ದೇವರ ಮೇಲೇ ಭಾರವ ಹಾಕುತ
ಪೇಪರ ಮೇಲ್ಗಡೆ ಕಲ್ಲನು ಮಡಗಿದೆ—
ಎದ್ದೆ.
ಬಂದೆ.
? ? ?
ಪ್ರೇತಗಳಂದದಿ ದಿನ ದಿನ ಬಂದು,
ಸುಳಿಸುಳಿದೋಡಿತು, ಅಲ್ಲಿ,
ಕನಸಿನ ಬಿಸಿ ಬಿಸಿ ರಜದಲ್ಲಿ
ಏಪ್ರಿಲ್ ಮೇಗಳ ಜೂನಿನಲಿ !
? ? ?

ಕಾದೆ !
ಕಾದೆ !
? ? ?
ಲಿಸ್ಟನು ನೋಡಲು, ಗೋಳನು ತಿಳಿಯಲು
ನಡೆದೇ ನಡೆದೇ, ನಡೆದೂ ನಡೆದೆ,
ನೂರಡಿ ರಸ್ತೆಯ ದಿಣ್ಣೆಯ ಹತ್ತಿದೆ,
ಕಡೆಯಲಿ ಸಿಕ್ಕಿತು ಗಾಜಿನ ಹಲಗೆ !
ನೋಡಿದೆನಲ್ಲಿ, ಆಗಾಜಿನಲಿ,
ನೋಡುತ್ತಿರೆಯಿರೆ, ಬೆಚ್ಚಿಬಿದ್ದೆ !
ಮೊಡಲನು ಹೆಮ್ಮೆಗೆ ಹಂಚುವರಲ್ಲಿ—
ಟೋಟಲೆ ಇಲ್ಲದೆ ಕೊರಗುವದಿಲ್ಲಿ—
ಆಕಡೆ ಫಸ್ಟ್ ಕ್ಲಾಸು,
ಈಕಡೆ ಫೋರ್ತ್ ಕ್ಲಾಸು,
ಅಯ್ಯೋ ! ಡುಂಕೀ ! ಕಲಿಯುಗ ದೆವ್ವಾ !
ಮಾರ್ಕನು ಲಟಲಟರೆಂಬುವ ದೆವ್ವಾ !
ನನ್ನಂಥವರಿಗೆ ಕೊಡದಿಹ ನಂಬರ
ಯುಗಯುಗ ತಿಂದರು ತೀರದೆ ಹಂಬಲ ?
ಕಟಕಟ ಕಡಿದರು ಮುರಿಯದೆ ಹಲ್ಲು ?—
ಗಾಜಿನ ಒಳಗಿಂ ಬಂದನು ಘುಂಕೀ
ನೋಡಿದನೆನ್ನಂ ! ಒಲ್ಲೇ ! ಒಲ್ಲೇ !
"ಎರವಲು ಗೌನನು ಹಾಕಲೆಬೇಕು !
ಕರದಲಿ ಡಿಗ್ರಿಯ ಪಿಡಿಯಲೆಬೇಕು !"
ನೋಡುತಲಿದ್ದೆ ! ಚೀರುತಲಿದ್ದೆ !
ಫೆಯಿಲೂ ! ಫೆಯಿಲೂ ! ಎನ್ನುತ ಕೂಗಿ,
ಸತ್ತೇ ! ಸತ್ತೇ !—
ಕಂಬಿಯ ಕಿತ್ತೆ.
! ! !
ಎಚ್ಚೆತ್ತೆ.



# ನೀತಿಬೋಧೆ

ಹಿಂದೆ ಭರತ ವರ್ಷದಲ್ಲಿ ಜನಿಸಿ, ಪುರುಷಾಯುಸ್ಸು ೧೨೦ ವರ್ಷಗಳೂ ಮುಗಿದಮೇಲೆ ಮೇಲಿನ ಲೋಕಗಳಿಗೆ ತೆರಳಿದ ಮಹಾತ್ಮರೆಲ್ಲರೂ ನಮ್ಮ ದೇಶದ ನವಚೈತನ್ಯಕ್ಕೆ ಮರುಳಾಗಿ ಮತ್ತೆ ಅವತಾರ ಮಾಡುತ್ತಿದಾರೆ ಎಂಬುದು ನನ್ನ ನಂಬಿಕೆ. 'ನಂಬಿಕೆ' ಏನು? ಅನುಭವ! ಅವತಾರ ಮಾಡಿದಾರೆ. ನನ್ನ ಮನೆಯಲ್ಲೇ ಇಂತಹ ಅವತಾರಗಳು ಐದು ಇವೆ. ಅಬ್ಬಬ್ಬ! ಅವು ಎಂತೆಂತಹ ಪ್ರಶ್ನೆಗಳನ್ನು ಕೇಳುತ್ತವೆ! ಎಂತೆಂತಹ ಉತ್ತರಗಳನ್ನು ಕೊಡುತ್ತವೆ! ದೇವರೇ ಕಾಪಾಡಬೇಕು. 'ಮರೆತುಹೋಯ್ತು' ಅಂದರೆ, ಎಲ್ಲಿಗೆ ಹೋಗುತ್ತದೆ ಅಂತ ಕೇಳುತ್ತಾನೆ ನಾಲ್ಕು ವರ್ಷದ ಲಕ್ಕು! "ಹೋಗಿಬಿಟ್ಟು ಬರುತ್ತೇನೆ, ಎನ್ನುತ್ತೀವಲ್ಲಾ; ಹೋದಮೇಲೆ ಬರಲೇ ಕೂಡದು" ಅಂತಾನೆ ಐದೂವರೆ ವರ್ಷದ ಕಿಟ್ಟು! ಒಬ್ಬನಿಗಿಂತ ಒಬ್ಬ, ಪ್ರಚಂಡ ವೇದಾಂತಿ!

ಆದರೆ, ಪುಟ್ಟಶೀನುವಿನಷ್ಟು ತುಂಟತನ ಯಾರಿಗೂ ಇರಲಾರದು. ಮೊದಮೊದಲು ಅವನನ್ನು ಹತ್ತೋಟಿಗೆ ತರಬೇಕಾದರೆ, ಒಂದೇ ಉಪಾಯವಿತ್ತು. 'ಕತೆ ಹೇಳುತ್ತೇನೆ, ಬಾರೋ' ಎಂದು ಹೇಳಿ ಕೂರಿಸಿಕೊಳ್ಳಬೇಕು. ನಾನು ಸ್ಕೂಲು ಮೇಷ್ಟ್ರಿದ್ದರಿಂದ ಶಾಲೆಯ ಉಪಯೋಗಕ್ಕಾಗಿ ಅನೇಕ ನೀತಿಯ ಕಥೆಗಳನ್ನು ಬಾಯಿಪಾಠ ಮಾಡಿಕೊಂಡಿದ್ದೇನೆ. ಅವುಗಳನ್ನೆಲ್ಲಾ ಒಂದೊಂದಾಗಿ ಪುಟ್ಟಶೀನುವಿಗೆ ಒಪ್ಪಿಸಿ, ಅವನ ಹಠಮಾರಿತನವನ್ನು ತಿದ್ದಲು ಪ್ರಯತ್ನಪಟ್ಟೆ. ಅವನಿಗೆ ಕಥೆಯನ್ನು ಆಮೂಲಾಗ್ರವಾಗಿ ಶ್ರವಣ ಮಾಡಿಸುವುದು ಒಂದೇ ಅಲ್ಲ. ಕಡೆಯಲ್ಲಿ, "ಪುಟ್ಟಶೀನು! ಈ ಕಥೆಯಿಂದ ಏನು ಗೊತ್ತಾಯಿತಪ್ಪಾ?" ಎಂದು ಕೇಳಿ, ಅವನ ಬಾಯಿಂದ ನೀತಿಯನ್ನು ಹೊರಡಿಸುತ್ತಿದ್ದೆ. ಆದರೆ, ಬರಬರುತ್ತಾ ಪುಟ್ಟಶೀನುವಿಗೆ ನನ್ನ ಗುಟ್ಟು ಗೊತ್ತಾಗಿಹೋಯಿತು. ಅವನೂ ಕೂಡ ಒಂದು ಹೊಸ ರೀತಿಯನ್ನು ಆಚರಿಸಿ, ನನಗೆ ಪಾಠ ಕಲಿಸಲು ಪ್ರಾರಂಭಿಸಿಬಿಟ್ಟ!

" ಪುಟ್ಟಶೀನು ! ಒಂದೂರಲ್ಲಿ ಒಂದು ಆಸ್ಪತ್ರೆ ; ಅಲ್ಲೊಬ್ಬ ಡಾಕ್ಟರು. ಒಂದು ದಿನ ಏನಾಗಿದೆ, ಆಸ್ಪತ್ರೆ ಬಾಗಿಲಲ್ಲಿ ಒಂದು ಕುಂಟುನಾಯಿ ನಿಂತಿತ್ತು. ನೋವಿನಿಂದ ತುಂಬಾ ನರಳುತ್ತಿತ್ತು. ಡಾಕ್ಟರಿಗೆ " ಅಯ್ಯೋ ! ಪಾಪ !" ಎನಿಸಿತು. ಎದ್ದು ಹೋಗಿ, ಅದನ್ನು ಒಳಕ್ಕೆ ಕರೆದು, ಕಾಲಿನ ಹುಣ್ಣನ್ನು ಬಿಸಿನೀರಿನಿಂದ ತೊಳೆದು, ಮುಲಾಮು ಹಚ್ಚಿ, ಬಿಳಿಯ ಬಟ್ಟೆ ಸುತ್ತಿ ಕಟ್ಟಿದರು. ನಾಯಿ ಬಾಲವನ್ನಲ್ಲಾಡಿಸುತ್ತಾ ಹೊರಟುಹೋಯಿತು. ನಾಲ್ಕೈದು ದಿನಗಳಾದಮೇಲೆ, ಅದೇ ನಾಯಿ ಮತ್ತೆ ಆಸ್ಪತ್ರೆಗೆ ಬಂತು. ಕಾಲಿನ ಹುಣ್ಣೆಲ್ಲವೂ ಸಂಪೂರ್ಣವಾಗಿ ವಾಸಿಯಾಗಿತ್ತು. ಆದರೆ, ಇನ್ನೊಂದು ನಾಯಿಯನ್ನೂ ಅದು ಜೊತೆಯಲ್ಲೇ ಕರೆದುಕೊಂಡು ಬಂದಿತ್ತು. ಅದರ ಕಾಲಮೇಲೆ ಗಾಡಿಯ ಚಕ್ರವು ಹರಿದುಹೋದದ್ದರಿಂದ ಅದು ಕುಂಟುತ್ತಿತ್ತು. ಸರಿ, ಡಾಕ್ಟರು ಅದಕ್ಕೂ ಔಷಧಿ ಹಚ್ಚಿ, ಬಟ್ಟೆ ಸುತ್ತಿ, ಬಿಗಿಯಾಗಿ ಕಟ್ಟಿದರು. ಎರಡು ನಾಯಿಗಳೂ ಅವರ ಕಾಲಿಗೆರಗಿ ಹೊರಟುಹೋದುವು. ನೋಡಿದೆಯಾ, ಪುಟ್ಟಶೀನು ! ಸ್ನೇಹ ಅಂದರೆ ನಾಯಿಗಳೂ ಕೂಡ " ಅಂತ ಕಥೆಯಿಂದ ನಾನು ನೀತಿಯನ್ನು ಬಿಡಿಸುವುದರೊಳಗೆ, ಪುಟ್ಟಶೀನು, " ಅಣ್ಣಾ ! ತಾಳು, ಮುಂದಿನ ಕಥೆ ನನಗೆ ಗೊತ್ತು. ಆಮೇಲೆ ಏನಾಯಿತಂತೆ, ಇನ್ನೊಂದುದಿನ ಅವೆರಡು ನಾಯಿಗಳೂ ಸೇರಿ, ಬೇರೆ ಎರಡು ಕುಂಟು ನಾಯಿಗಳನ್ನು ಕರೆದುತಂದು, ಔಷಧಿ ಹಚ್ಚಿಸಿಕೊಂಡು ಹೋದುವಂತೆ. ಮಾರನೆಯ ದಿನ, ಡಾಕ್ಟರು ಆಸ್ಪತ್ರೆಯ ಬಾಗಿಲನ್ನು ತೆಗೆಯುವುದೇ ತಡ, ಆ ನಾಲ್ಕು ನಾಯಿಗಳೂ ಕಾದು ನಿಂತಿವೆ. ಇನ್ನು ನಾಲ್ಕು ಕುಂಟು ನಾಯಿಗಳ ಸಹಿತ. ಡಾಕ್ಟರಿಗೆ ಅವುಗಳನ್ನು ನೋಡಿ ಅಸಹ್ಯವಾಯಿತು. ಏನು ಮಾಡುತ್ತಾರೆ ? ವಿಧಿಯಿಲ್ಲ. ಆದಿನ ಮುಲಾಮಿನ ಡಬ್ಬವೆಲ್ಲಾ ಖಾಲಿ ಆದುವು. ಮರುದಿನ, ಎಂಟು ಕುಂಟು ನಾಯಿಗಳು. ಅದರಾಚೆ ದಿನ, ಹದಿನಾರು! ಹೀಗೆ, ಮೂವತ್ತೆರಡು, ನೂರಿಪ್ಪತ್ತೆಂಟು, ಐನೂರಹನ್ನೆರಡು— ರಾಮ, ರಾಮ, ಡಾಕ್ಟರ ಗೋಳನ್ನು ಹೇಳತೀರದು. ಎಲ್ಲರೂ ಅವರನ್ನು ' ನಾಯಿ ಡಾಕ್ಟರು ' ಎಂದು ಕರೆಯತೊಡಗಿದರು. ಅವುಗಳ ಕಾಟದಿಂದ ತಪ್ಪಿಸಿಕೊಳ್ಳೋಣ ಅಂತ ಅವರು ಕಲ್ಲು ಬೀರಿದರು, ದೊಣ್ಣೆ ಬೀಸಿದರು, ವಿಷ ಬೆರೆಸಿದ ಅನ್ನ ಹಾಕಿಸಿದರು. ಆದರೂ ಕೂಡ, ಒಂದು ದಿನ ಆಸ್ಪತ್ರೆ

ಮುಂದುಗಡೆ ಸಾವಿರದ ಇಪ್ಪತ್ತನಾಲ್ಕು ನಾಯಿಗಳು, ಅವುಗಳ ಜೊತೆಗೆ ಅಷ್ಟೇ ಕುಂಟು ನಾಯಿಗಳು ಚಿಕಿತ್ಸೆಗಾಗಿ ನಿಂತಿವೆ! ಆದಿನ, ಡಾಕ್ಟರಿಗೆ ಜ್ವರ ಬಂತಂತೆ. ನೆಟ್ಟಗೆ, ಮನೆಗೆ ಹೋಗಿ ಹಾಸಿಗೆಯಲ್ಲಿ ಬಿದ್ದರು. "ನಾಯಿಗೆ ಮುಲಾಮು ಹಚ್ಚೋ!", "ಆ ನಾಯಿಮರಿಗೆ ಬಟ್ಟೆ ಕಟ್ಟೋ", "ಕೆಂಪು ನಾಯಿಯನ್ನು ಬೇಗ ಕಳುಹಿಸೋ" ಎಂದು ಕಿರಿಚುತ್ತಾ, ಕಿರಿಚುತ್ತಾ, ಮರುದಿನ ಸಂಜೆ ಪ್ರಾಣ ಬಿಟ್ಟರಂತೆ. ಅಲ್ಲವೇ ಅಣ್ಣಾ ?" ಎಂದು ಹೇಳಿ, ಕಥೆಯನ್ನು ಮುಗಿಸಿಬಿಡುವನು, ಪುಟ್ಟಶೀನು.

"ಪುಟ್ಟಶೀನು! ಒಂದೂರಲ್ಲಿ ನಾಲ್ಕು ಗೂಳಿಗಳಿದ್ದುವಂತೆ. ಅವು ಯಾವಾಗಲೂ ಒಟ್ಟಿಗೆ ಮೇಯುತ್ತಾ ಇದ್ದುದರಿಂದ, ಊರ ಹತ್ತಿರದ ಕಾಡಿನಲ್ಲಿ ವಾಸವಾಗಿದ್ದ ಒಂದು ಸಿಂಹ...." ಅಂತ ನಾನು ಪೀಠಿಕೆ ಹಾಕುವುದರೊಳಗೆ, ಪುಟ್ಟಶೀನು, "ಗೊತ್ತು, ಅಣ್ಣಾ ನೀನು ಹೇಳುವುದು ಯಾವುದೋ ಬೆಪ್ಪು ಸಿಂಹದ ಕಥೆ. ಆದರೆ, ನೋಡಿಲ್ಲಿ, ಅದೇ ಕಾಡಿನಲ್ಲಿ ಇನ್ನೊಂದು ಸಿಂಹ ಇತ್ತಂತೆ. ಅದಕ್ಕೆ ಯಾರೋ ಈ 'ನಾಲ್ಕು ಗೂಳಿಗಳ ಕಥೆ 'ಯನ್ನು ಹೇಳಿಬಿಟ್ಟಿದ್ದರಂತೆ. ಆದಕ್ಕೆ ಗೊತ್ತು ಗೂಳಿಗಳ ಒಗ್ಗಟ್ಟು. ಆದ್ದರಿಂದ, ಅದು ಬೇರೆ ಮೂರು ಸಿಂಹಗಳನ್ನೂ ಜೊತೆಯಲ್ಲೇ ಕರೆದುಕೊಂಡು, ಅವುಗಳ ಮೇಲೆ ಬಿದ್ದು, ಎಲ್ಲವನ್ನೂ ಕೊಂದು, ತಮ್ಮ ತಮ್ಮ ಪಾಲನ್ನೂ, ಎಳೆದುಕೊಂಡು ಹೋದುವಂತೆ. ಐಕಮತ್ಯವನ್ನು ಮುರಿಯಬೇಕಾದರೆ ಐಕಮತ್ಯದಿಂದಲೇ ಸಾಧ್ಯ!" ಅಂತ ಶೀನು ನನಗೆ ಹೇಳಿಬಿಡುತ್ತಾನೆ.

ಮತ್ತೊಂದು ದಿನ, ಹುಲಿಯ ಚರ್ಮವನ್ನು ಹೊದ್ದುಕೊಂಡು, ರೈತರನ್ನು ಬೆದರಿಸಿದ ಕತ್ತೆಯ ಕಥೆಯನ್ನು ಪುಟ್ಟಶೀನುವಿಗೆ ಬಹು ಸ್ವಾರಸ್ಯವಾಗಿ ಹೇಳಿದೆ. ಹುಲಿಯು ಕತ್ತೆಯಹಾಗೆ ಅರಚಿದಾಗ, ಗೌಡರೆಲ್ಲರೂ ಅದರ ಹತ್ತಿರ ಬಂದು, ಅದನ್ನು ಸದೆಬಡಿದರು ಎಂದು ಹೇಳುವುದೇ ತಡ, ಪುಟ್ಟಶೀನು, "ಅಣ್ಣಾ! ಆಮೇಲೆ ಹೇಳುತ್ತೇನೆ, ಕೇಳು. ಆ ಗೌಡರಲ್ಲೊಬ್ಬ ಮನೆಗೆ ಹೋಗಿ—ಎಲಾ! ನನಗೆ ಕತ್ತೆಗಿಂತ ಮೆದುಳಿದೆ. ನಾನು ಯಾಕೆ ಈ ಉಪಾಯವನ್ನು ಅನುಸರಿಸಿ ಜಾಣತನದಿಂದ ಜೀವಿಸಬಾರದು? ಎಂದು ಯೋಚಿಸಿದನಂತೆ. ಎಲ್ಲಿಂದಲೋ ಒಂದು ಸಿಪಾಯಿ ಡ್ರೆಸ್ಸು ಸಂಪಾದಿಸಿ,

ಸುತ್ತಲ ಹಳ್ಳಿಗಳಿಗೆ ಹೋಗಿ, ಜನಗಳನ್ನು ಗದರಿಸಿ, ಹಣ ಸಂಪಾದಿಸುತ್ತಿದ್ದ ನಂತೆ. ಒಂದು ದಿನ ಅವನನ್ನು ಯಾರೋ ಪತ್ತೆ ಮಾಡಿದರಂತೆ. ಅವರಿಗೂ ಅದೇ ಯೋಚನೆ ಬಂದು, ಕಾಷಾಯ ಹಾಕಿ, ದೊಡ್ಡ ಸನ್ಯಾಸಿ ಅಂತ ನಟಿಸಿ, ಛತ್ರಿ ಚಾಮರ ಎಲ್ಲವನ್ನೂ ಸಂಪಾದಿಸಿ, ಬಿರುದು ಬಿಂಕಗಳನ್ನು ಪಡೆದರಂತೆ. "ಅವರು ಯಾರು, ಎತ್ತು, ಎಂಬುದನ್ನು ವಿಚಾರಿಸಲೇಕೂಡದು. ಹಾಗೆ ಮಾಡಿದರೆ, ಕುಂಭೀಪಾಕವೇ ಗತಿ ಎಂದು ಬೇರೆ ಸಾರಿ ಅವರು ಈಗ ದೊಡ್ಡ ಜಗದ್ಗುರುಗಳಾಗಿದಾರಂತೆ" ಎಂದು ಪುಟ್ಟಶೀನು ಕಥೆಯನ್ನು ಡೊಂಕು ದಾರಿಗೆ ಎಳೆದುಬಿಡುವನು; ವಕ್ರ ಬುದ್ಧಿ, ಹುಡುಗನದು.



# ಕಬ್ಬಿಗರ ಕೂಟ, ಗೋಳೂರು

## ೧೯೩೪ ಏಪ್ರಿಲ್ ತಾ|| ೧ನೆಯ ಶನಿವಾರ

---

### ಕಾ ಯ ರ್ ಕ್ರ ಮ :

ಬೆಳಗ್ಗೆ ೭–೩೦ ರಿಂದ ೮ ರವರೆಗೆ—ಅನ್ನಪೂರ್ಣೇಶ್ವರಿ ಭಜನೆ

೮ ರಿಂದ ಮಧ್ಯಾಹ್ನ ೧೨ ರವರೆಗೆ—

೧. ಸ್ವಾಗತ ಭಾಷಣ : ('ಉಪವಾಸ' ಎಂಬ ನೀಳ್ಗವನವನ್ನು ಬರೆಯುತ್ತಿರುವ) ಶ್ರೀಮಾನ್ ಉಪವಾಸೆ ಗೌಡರವರಿಂದ.

೨. ಸಂದೇಶ ಪಠನ : (ಪ್ರಯಾಣಕ್ಕೆ ಬೇಕಾದ ಅನುಕೂಲಗಳಿಲ್ಲದಿರುವುದರಿಂದ ಅಲ್ಲಲ್ಲೇ "ಗೋಳೂರು ಕಬ್ಬಿಗರ ಕೂಟ" ಗಳನ್ನು ನಡೆಸುವ ಕವಿಗಳಿಂದ.)

೩. ಪ್ರಾರಂಭ ಭಾಷಣ : (ಯಾರಿಂದ ಎಂಬುದನ್ನು ಇನ್ನೂ ನಿರ್ಧರಮಾಡಿಲ್ಲ.)

೪. ಅಧ್ಯಕ್ಷ ಭಾಷಣ : (ತಮ್ಮ ಕವನಗಳನ್ನು ಕಳುಹಿಸುವುದಕ್ಕೂ, ತರಿಸುವುದಕ್ಕೂ ಆದ ಅಂಚೆ ವೆಚ್ಚದಿಂದಲೇ ದಿವಾಳಿಯಾದ) ಶ್ರೀಮಾನ್ ಬೆವರಯ್ಯನವರಿಂದ.

೧೨ ರಿಂದ ೨ ರವರೆಗೆ—

ಕಾವ್ಯರಾಶಿ ಪ್ರದರ್ಶನ : (೧. ತಮ್ಮ ಕವನಗಳನ್ನೆಲ್ಲವನ್ನೂ ತರಲೋಸುಗ ಎಲ್ಲರಿಗೂ ಲಾರಿಗಳನ್ನು ಒದಗಿಸಲಾಗುವುದು. ೨. ಕಂತೆಗಳನ್ನು ಹಿಂದಕ್ಕೆ ತೆಗೆದುಕೊಂಡು ಹೋಗಲು ಮನಸ್ಸಿಲ್ಲದವರು, ಕಾರ್ಯಾಲಯದಿಂದ ಮಣ ಒಂದಕ್ಕೆ ಆರು ಕಾಸಿನಂತೆ ಹಣವನ್ನು ಪಡೆಯಬಹುದು. ೩. ಕವಿತಾಶಕ್ತಿ ಬೆಳೆದು, ಬೆಳಕಿಗೆ ಬರಲು ಅಡ್ಡಿಮಾಡುತ್ತಿರುವ ಹುಳ, ಹುಪ್ಪಟೆ, ಸಂಪಾದಕ, ಧೂಳು, ಮುಂತಾದವುಗಳನ್ನು ಪ್ರದರ್ಶನದಲ್ಲಿ ಇರಿಸಲಾಗುವುದು.)

ಪ್ರದರ್ಶನದ ಕವಾಟೋತ್ಸವವನ್ನು ಶ್ರೀಮಾನ್ ಮನಿಶೆಟ್ಟರು ನೆರವೇರಿ ಸುವರು. (ಇವರು ಕವಿಗಳೆಲ್ಲರಿಗೂ ತಲಾ ಒಂದು ಕೊಡದಂತೆ ಮಸಿಯನ್ನು ದಾನ ಮಾಡುತ್ತೇನೆಂದು ವಾಗ್ದಾನ ಮಾಡಿದಾರೆ.)

೨ ರಿಂದ ರಾತ್ರಿ ೧೦-೩೦ ರವರೆಗೆ—

ಕಾವ್ಯಪಠನ : (೧. 'ಅವರವರು ಹೊಸೆದಿರುವ ಕವನಗಳನ್ನು ಅವ ರವರೇ ಓದಬೇಕು' ಎಂಬ ನಿರ್ಬಂಧವನ್ನು ಯಾರೊಬ್ಬರ ವಿಷಯ ದಲ್ಲೂ ಸಡಿಲ ಮಾಡಲು ಸಾಧ್ಯವಿಲ್ಲ. ೨. ಮೂರ್ಛೆ, ಹೃದಯ ಸ್ತಂಭನ ಮುಂತಾದ ಆಕಸ್ಮಿಕಗಳಿಗೆ ವೈದ್ಯ ಸಹಾಯವನ್ನು ಒದ ಗಿಸಲಾಗುವುದು.)

೧೦-೩೦ ರಿಂದ ೧೨ ರವರೆಗೆ—

ಠರಾವುಗಳು : (೧. ಎಲ್ಲಾ ಪ್ರೈಮರಿ ಶಾಲೆಗಳಲ್ಲಿಯೂ, ಪ್ರತಿ ವಿದ್ಯಾ ರ್ಥಿಗೂ ಕಡೆಯಪಕ್ಷ ೨೦೦೦ ಪಂಕ್ತಿ ಪದ್ಯವನ್ನಾದರೂ ಕಂಠಪಾಠ ಮಾಡಿಸಬೇಕು. ೨. ಸರ್ಕಾರಿ ರಿಪೋರ್ಟುಗಳನ್ನೂ, ರೈಲ್ವೆ ಟೈಂ ಟೇಬಿಲ್ಲುಗಳನ್ನೂ, ಪದ್ಯ ರೂಪದಲ್ಲಿ ಪ್ರಕಟಿಸಬೇಕು. ೩. ವರ್ಷ ವೊಂದಕ್ಕೆ ೫೦೦ ರೂಪಾಯಿ ಮೇಲ್ಪಟ್ಟು, ಆದಾಯ ತೆರಿಗೆ ಕೊಡು ತ್ತಿರುವವರೆಲ್ಲರೂ, ತಮ್ಮ ಮನೆಯಲ್ಲಾಗುವ ಮದುವೆ, ಮುಂಜಿ ಗಳಲ್ಲಿ ಕವಿಗೋಷ್ಠಿಗಳನ್ನು ಸೇರಿಸಿ, ಅವರಿಗೆ ಮರ್ಯಾದೆ ಮಾಡು ವಂತೆ ಸರ್ಕಾರದವರು ಒತ್ತಾಯಪಡಿಸಬೇಕು. ೪. ವರ್ಷಕ್ಕೆ ೧೫ ಹೊಸ ಕವಿಗಳ ಗ್ರಂಥಗಳನ್ನು ಸರ್ಕಾರಿ ಮುದ್ರಣಾಲಯದಲ್ಲಿ ಉಚಿತವಾಗಿ ಅಚ್ಚು ಮಾಡಿಕೊಡಬೇಕು.)

೧೨ ರಿಂದ ೨ ರವರೆಗೆ—

ವಿಮರ್ಶಕ ಪೂಜೆ : (ಕವಿ, ಕಾವ್ಯ, ಕಂಟಕನಾದ 'ವಿಮರ್ಶಕ'ನ ಒಂದು ಗೊಂಬೆಯನ್ನು ನಡುಬಯಲಿನಲ್ಲಿ ನಿಲ್ಲಿಸಲಾಗುವುದು. ಅದನ್ನು ಬಳಸಿಕೊಂಡು, ಸಮ್ಮೇಳನಕ್ಕೆ ಬರುವ ಕವಿಗಳು, ಷೋಡ ಶೋಪಚಾರಗಳಿಂದ, ಸೇಡು ತೀರಿಸಿಕೊಳ್ಳಬಹುದು.)

೨ ಗಂಟೆಗೆ--

ಮಂಗಳಂ.

೨ ರಿಂದ--

ನಿಪ್ರೆ : (ತಮ್ಮ ಕವನಗಳಿಗೆ ಅಕ್ಷರಲಕ್ಷ ಸಿಕ್ಕಿದಹಾಗೂ, ಅವುಗಳ ಮೇಲೆ ಡಿಗ್ರಿ ಪರೀಕ್ಷೆಗಳಿಗೆ ಪ್ರಶ್ನೆಗಳನ್ನು ಕೊಟ್ಟಂತೆಯೂ, ಮಹಾ ಮಹೋಪಾಧ್ಯಾಯರೂ, ವಿದೇಶಿ ಪದವೀಧರರೂ ಅವುಗಳನ್ನು ಗಟ್ಟಿ ಮಾಡುವಂತೆಯೂ, ಕರ್ಣಾಟಕದ ಕವಿಚರಿತೆಯಲ್ಲಿ ತಮ್ಮ ಹೆಸರಿರು ವಂತೆಯೂ, ಕವಿಗಳಿಗೆ ಕನಸಾಗಲು ಸಮ್ಮೇಳನದ ಅಧಿಕಾರಿಗಳು ಏರ್ಪಾಟು ಮಾಡುವರು.)

ವಿ. ಸೂ.—ಕಾರ್ಯಕ್ರಮದಲ್ಲಿ ಬಿಡುವೇ ಇಲ್ಲವಾದ್ದರಿಂದ ಭೋಜನ ಸ್ನಾನಾದಿಗಳಿಗೆ ಸ್ವಾಗತ ಸಮಿತಿಯವರು ಯಾವ ಸೌಕರ್ಯಗಳನ್ನೂ ಕಲ್ಪಿಸಿಲ್ಲ ಎಂಬುದು ಗಮನಾರ್ಹವಾಗಿದೆ.

ಆಜ್ಞಾತಕವಿಸಾರ್ವಭೌಮೇತ್ಯಾದಿ ಬಿರುದಾಂಕಿತರಾದ

"ಕವಿತಾಕುಠಾರ" **ಮೂಗಯ್ಯನವರು,**

ಗೋಳೂರು. ಕಾರ್ಯದರ್ಶಿ.

# ಏ ನ ನ್ಯಾ ಯ !

೧

ನಿಮ್ಮ ವಿಶ್ವವಿದ್ಯಾನಿಲಯದಲ್ಲಿ ಎಷ್ಟು ಜನರು ವ್ಯಾಸಂಗ ಮಾಡುತ್ತಿದಾರೆ ಅಂತ ಯಾರೋ ಒಬ್ಬರು ದೊಡ್ಡ ಮನುಷ್ಯರು ಕೇಳಿದರೆ, ಅಧಿಕಾರಿಗಳು, "ಹತ್ತರಲ್ಲೊಬ್ಬ" ಅಂತ ಉತ್ತರ ಕೊಡೋದೇ ?

೨

ವರ್ಗವಾಗಿ ಇನ್ನೊಂದೂರಿಗೆ ಹೊರಡುವ ಅಧಿಕಾರಿಗಳು ಊರಿನವರನ್ನು ಕುರಿತು, "ಚಿಂತಿಸಬೇಡಿ! ನಾನು ಹೊರಟುಹೋದರೂ ಕೂಡ, ನನಗಿಂತ ಒಳ್ಳೆಯವರೇ ಬರುತ್ತಾರೆ" ಅಂತ ಸಮಾಧಾನ ಹೇಳುತ್ತಿದ್ದರೆ, ಸಭಿಕರಲ್ಲೊಬ್ಬ "ತಾವು ಬರುವುದಕ್ಕೆ ಮೊದಲು ಇಲ್ಲಿ ಇದ್ದವರೂ ಕೂಡ ಇದೇ ರೀತಿ ಹೇಳಿ ಹೋದರು ; ಅದರಿಂದಲೇ ನಮಗಿಷ್ಟು ಯೋಚನೆ" ಅಂತ ಮನಸ್ಸಿನಲ್ಲಿದ್ದ ಆತಂಕವನ್ನ ಬಿಚ್ಚಿ ಹೇಳಿಬಿಡೋದೇ ?

೩

ಆಫೀಸ್‌ರೂಂನಲ್ಲಿ ತಮ್ಮ ಮೇಜಿನ ಕೆಳಗೆ ಬಿದ್ದಿದ್ದ ಬೀಡಿ ಚೂರನ್ನು ಕಂಡು, ರೇಗಿ, "ನಿನ್ನದೇನೋ ಇದು ?" ಅಂತ ಸಾಹೇಬರು ಬೋರನನ್ನು ಬೆದರಿಸುತ್ತಿದ್ದರೆ, ಅವನು, "ಅಯ್ಯೋ! ಅಯ್ಯೋ! ಅದಕ್ಕೇನು ಧಣಿ! ನನ್ನದಾದ ಮಾತ್ರಕ್ಕೆ ತಾವು ನನ್ನ ಅಪ್ಪಣೆ ಕೇಳಬೇಕೆ? ತೆಗಿದು ಸೇದಿ, ಸ್ವಾಮಿ ! ಸೇದಿ !" ಅಂತ ಹೇಳಬಹುದೇ ?

೪

ಮನೆಗೆ ಬಂದು ಮೂರು ತಿಂಗಳಿಂದಲೂ ಬಿಡಾರ ಹೂಡಿದ್ದ ನೆಂಟ "ಶೀನಾ! ಏನೋ ಹೇಳಬೇಕು ಅಂತ ಇದ್ದೆ. ಮರೆತೇಹೋಯಿತಲ್ಲಾ!" ಅಂತ ತಲೆ ಕೆರೆದರೆ, "ಹೋಗಿಬಿಟ್ಟು ಬರುತ್ತೇನೆ" ಅಂತ ತಾನೆ? ಅಂತ ಆತ ಅನ್ನಬಹುದೇ ?

೫

"ರಾಯರಿಲ್ಲವೇನೋ ಮನೇಲಿ ?" ಅಂತ ಕೇಳಿದರೆ, "ಅವರೇ ಒಳಗೆ ಕುಂತುಕೊಂಡು ಹೇಳುತ್ತಾ ಅವರೆ, ಮನೆಯಲ್ಲಿಲ್ಲ, ಅಂತ—ಇನ್ನೂ ತಮಗೆ ಅನುಮಾನವೇ ? ಮನೇಲಿಲ್ಲಾ, ಬುದ್ಧೀ" ಅಂತ ಜವಾನ ಒದರಿಬಿಡೋದೇ ?

---

# ಎಂಥ ಹೆಸರಿವು !

---

[ಕ್ರಿ. ಶ. ೨೦೩೮ ರಲ್ಲಿ ಅಚ್ಚಾದ ಒಂದು ಕನ್ನಡ ಕವನ ಸಂಗ್ರಹವು ಅದೃಷ್ಟವಶಾತ್ ನಮ್ಮ ಕೈಸೇರಿದೆ. ಅದರಲ್ಲಿ ಒಟ್ಟು ೩೮ 'ತುಂಡು' ಗಳಿವೆ. ತೆಳ್ಳಯಾದ ಧಾಟಿ ; ಶಿಥಿಲವಾದ ಪುಟಗಳು ; ಕವಿಯು ತುಂಬಾ ಬುದ್ಧಿವಂತ. ಮುನ್ನುಡಿಯ ಮೂರನೆಯ ಪ್ಯಾರಾದಲ್ಲಿ ಅವನು, "'ಎಂಥ ಹೆಸರಿವು' ಎಂಬ 'ಪಂಕ್ತಿ ಸಮುದಾಯ' ವನ್ನು ನಾನು ಜೋಡಿಸಿದ್ದು ಒಂದು ಸೋಜಿಗದ ಸಂಗತಿ. ೧೯೩೮ನೆಯ ಸಾಲಿನ ಒಂದು ಕಾಲೇಜು ಹಾಜರಿ ರಿಜಿಸ್ಟರನ್ನು ಆಕಸ್ಮಾತ್ತಾಗಿ ನಾನು ತಿರುವಿಹಾಕಿದಾಗ, ಆಗಿನ ಕಾಲದ ನಮ್ಮ ಹಿರಿಯರ ಹೆಸರುಗಳ ಬಿಸಿ ಉಸಿರು ನನ್ನ ಕಿವಿಯೊಳಗೆ ತುಂಬಿತ್ತು. ನನ್ನ ಎದೆಯನ್ನು ಕಂಪಿಸಿತು. ಆ ಹೆಸರುಗಳಲ್ಲಿ ಪ್ರತಿಬಿಂಬಿತವಾಗಿದ್ದ ಸಂಸ್ಕೃತಿಗೆ ನಮ್ಮ ಸಂಸ್ಕೃತಿಯನ್ನು ಒರೆಹಚ್ಚಿ, ಮನಕರಗಿ, ನಮ್ಮವರನ್ನು ಎಚ್ಚರಗೊಳಿಸಲು ಈ ಪದ್ಯದಲ್ಲಿ ಯತ್ನಿಸಿದೇನೆ" ಎಂದು ಕವಿಯು ಬರೆದಿದಾನೆ. 'ಪದ್ಯ' ವನ್ನು ಓದುವಾಗ ಸಹಜವಾಗಿಯೇ ನಮ್ಮಲ್ಲಿ ಹೆಮ್ಮೆಯು ಹೊಮ್ಮುತ್ತದೆ. ಆದರೆ, ಕೇವಲ ನಮ್ಮ ಹೆಸರುಗಳಿಂದಲೇ ನಾವು ಪೂಜ್ಯರೆಂದು ತಿಳಿದು, ನಮ್ಮನ್ನು ಮಿತಿಮೀರಿ ಸ್ತೋತ್ರ ಮಾಡುವ ಕವಿತೆಯನ್ನು ಓದುವಾಗ, ನಮಗೆ ನಾಚಿಕೆಯಾಗದಿರಲಾರದು.]

**ಎಂಥ ಹೆಸರಿವು !**

[ಓಂ ಶ್ರೀನಿವಾಸಾಯನಮಃ]

ನಿರ್ವಾಣ, ಸಂಪತ್ತು, ಬಸವಣ್ಣ, ಗುಂಡಪ್ಪ !
ಬಲವಂತ, ಹುಲಿಗೌಡ, ರತ್ನಯ್ಯ, ಕಸ್ತೂರಿ !!
ಕೆಂಚಯ್ಯ, ಕರಿಕುದುರಿ, ಮಲ್ಲಪ್ಪ, ಕೇಸರಿ !
ಆನಂದ, ಜಯಸಿಂಹ, ಸಿಂಗೈಯ್ಯ, ವೀರಪ್ಪ !!

ಬಾದಾಮಿ, ಹೊಂಬಾಳೆ, ಕೈಲಾಸ, ಚೆನ್ನಯ್ಯ !
ಧನಕೋಟಿ, ಹುಚ್ಚಯ್ಯ, ಸಂಜೀವ, ಸಜ್ಜಪ್ಪ !!

ಅಶ್ವತ್ಥ, ಹೊಂಗೈಯ್ಯ, ಮಾಣಿಕ್ಯ, ಆಲಪ್ಪ !
ಶಾಂತಯ್ಯ, ಗುರುರಾಯ, ದುರ್ಗಪ್ಪ, ಹೊನ್ನಯ್ಯ !!

ಬಿಂಕಪ್ಪ, ಕಲ್ಲಯ್ಯ, ಬಿಳಿಗಿರಿ, ರಾಜಣ್ಣ !
ಸುಂದರಾ, ಚಂದ್ರಯ್ಯ, ನವರತ್ನ, ಹಾಲಯ್ಯ !!
ಯತಿರಾಜ, ಶೂರಪ್ಪ, ರಣಯೋಧ, ಧೀರಯ್ಯ !
ಕರಿಘಟ್ಟ, ಶ್ರೀಸತ್ಯ, ವೇದಾಂತ, ಚೆಲುವಣ್ಣ !!

ಎಂಥ ಹೆಸರಿವು ನೋಡಿ ! ಹಿಂದಿನಾ ಯುಗದಲ್ಲಿ
ದೇಹಬಲ, ಎದೆಕೆಚ್ಚು, ತುಂಬಿತ್ತು, ಧನಧಾನ್ಯ !
ಆ ಪರಿಯ ಧೀರತೆಯು ಈಗೆಮಗೆ ಬರಿಶೂನ್ಯ,
ಈ ಗೋಳು ಬಾಳಿನಲಿ ಅಂದಿನಾನಿರಿಯಿಲ್ಲ.

ಅಂಥವರ ನೆನೆಯುತ್ತ, ಸಂದವರ ನೆರಳಿನಲಿ,
ಕನಸಿನಲಿ ಹೊಳೆಹೊಳೆವ ಕನ್ನಡವ ಕಟ್ಟೋಣ !
ಆಗಿನಾ ಹೆಸರುಗಳ ಮಿಂಚೆಮ್ಮ ನೆತ್ತರಲಿ
ಮತ್ತೊಮ್ಮೆ ಚಿಮ್ಮುತ್ತ, ಮುಗಿಲನ್ನು ಮುಟ್ಟೋಣ !!



# ಕನ್ನಡ ಕವಿಗಳ ಪರಿಚಯ

## ಸು ಕ ವಿ ಶು ಕ

ಈತನು ಒಬ್ಬ ಪ್ರಸಿದ್ಧ ಕವಿಯಾಗಿದ್ದಿರಬೇಕು. ಕ್ರಿ. ಶ. ಸುಮಾರು ೧೩೧೨ ರಲ್ಲಿ ಈತನು ಜನಿಸಿರಬಹುದು. ಇದೇ ಹೆಸರಿನ ಇನ್ನಿಬ್ಬರು ಕವಿಗಳು ಇದ್ದರು ಎಂದು ಕೆಲವರೂ, ಇರಲಿಲ್ಲವೆಂದು ಬೇರೆ ಕೆಲವರೂ, ವಾದಿಸುವರು. ಅಂದರೆ, ಅವರಲ್ಲಿ ಯಾರನ್ನು ನಾವು ಒಂದನೆಯ ಸುಕವಿಶುಕ ಎಂದು ಆದರಿಸಬೇಕೆಂಬುದು ವಿವಾದಾಸ್ಪದವಾಗಿದೆ.

ಪ್ರಾಚೀನ ಮತಗ್ರಂಥವಾದ ಜಾಂಬವಂತೋಪಾಖ್ಯಾನದಲ್ಲಿ ಈತನ ಹೆಸರು ಸೂಚಿತವಾಗಿಲ್ಲವಾದ್ದರಿಂದ, ಸುಕವಿಶುಕನು ಜಾಂಬವಂತನ ಹಿಂದಿನ ಕಾಲದವನಾಗಿದ್ದಿರಬೇಕೆಂದೂ, ಆಗ 'ಶುಕಕಾಕಪಿಕ' ಗಳು ಇನ್ನೂ ಭರತ ವರ್ಷದಲ್ಲಿ ಬಂದು ನೆಲೆಸಿರಲಿಲ್ಲವಾದ್ದರಿಂದ, ಆತನ ಹೆಸರನ್ನು ಸುಕ–ವಿಶುಕ ಎಂಬುದಾಗಿ ಬಿಡಿಸಿ, ಅರ್ಥ ಹುಡುಕಬೇಕೆಂದೂ ಡಾ|| ಬ್ಲಂಡರ್ ಬಸ್ಸರು ಬರೆಯುತ್ತಾರೆ. (ಕಗ್ಗ. ೧೯೩೫ ಪುಟ ೧೩೩) ಪಿಂಗಳಧ್ವಜ ವಿಜಯದಲ್ಲಿ ಈತನ ಹೆಸರು ಇರಬಹುದಾದ್ದರಿಂದ ಈತನೂ ಪಿಂಗಳ ಪಂಗಡಕ್ಕೆ ಸೇರಿದ ದ್ವಿಜನಾಗಿರಬೇಕೆಂದು ಊಹಿಸಲು ಅವಕಾಶವಿದೆ.

ಸುಕವಿಶುಕನು ಯಾವ ಕವನವನ್ನೂ ರಚಿಸಿದಂತೆ ತಿಳಿದುಬಂದಿಲ್ಲ! ಕನ್ನಡಿಗರ ಮೇಲೆ ಅವನಿಗಿದ್ದ ಅಪಾರವಾದ ಪ್ರೀತಿಯಿಂದಲೇ ಹೀಗೆ ಅವನು ತನ್ನ ಅನಿತರ ಸಾಧಾರಣವಾದ ಪ್ರತಿಭೆಯನ್ನು ಹೊರಗೆಡಹದೆ ಬಿಗಿಹಿಡಿದಿರಬೇಕಲ್ಲವೆ? ಈತನು ತೀರಿಕೊಂಡ ತಾರೀಖನ್ನೂ ಕೂಡ ನಿರ್ದಿಷ್ಟವಾಗಿ ಹೇಳುವಹಾಗಿಲ್ಲ. ಎಂತಹ ಶೋಚನೀಯವಾದ ಸಂಗತಿ! ಮತ್ತೊಂದು ಸೋಜಿಗದ ವಿಷಯ: "ಸತ್ತರ್ೞ, ಇನ್ನು ಪುಟ್ಟರ್ೞ" ಎಂಬ ಆಧುನಿಕ ಕನ್ನಡ ಕವಿವರ್ಯರೊಬ್ಬರ ಮಾತು ಸುಕವಿಶುಕನಿಗೂ ಅನ್ವಯಿಸುತ್ತದೆ!!

ಆದರೆ, ಸುಕವಿಶುಕನ ಜನ್ಮದಿನ ಯಾವುದೆಂದು ನಾವು ನಿಸ್ಸಂದೇಹವಾಗಿ ಹೇಳಿಬಿಡಬಹುದೆಂದು ತೋರುತ್ತದೆ. ಅನುಮಾನ ಹಳ್ಳಿಯ ೩ನೆಯ ಶಾಸನದಲ್ಲಿನ "× × × ರಣಂ × ಶುಖ × × × ತಂ" ಎಂಬುದನ್ನು ನೋಡಿ. ಮೊದಲು ಬಿಟ್ಟು ಹೋಗಿರುವ 'ಜಾಗ' ಎಂಬುದನ್ನು ಸೇರಿಸಿ, **ಸುಕ** ಎಂಬುದಕ್ಕೆ ಬದಲಾಗಿ 'ಶುಖ' ಎಂದು ಬಿದ್ದಿರುವದನ್ನು ತಿದ್ದಿ, ಅನಂತರ **ವಿಶುಕಂ** ಎಂಬ ಅಕ್ಷರಗಳನ್ನು ಬರೆಯುವಾಗ **ವಿಶು** ಎಂಬುದು ಅಳಿಸಿಹೋಗಿದೆ ಎಂದು ಮನಗಂಡು, **ಕಂ** ಎಂಬುದಕ್ಕೆ **ತಂ** ಎಂದು ತಪ್ಪು ಹಾಕಿರುವುದನ್ನು ಪತ್ತೆ ಮಾಡಿ, ಡಾ॥ ಇಜ್ಞೋಡಿ ಅವರು ಶಾಸನವನ್ನು 'ಜಾಗರಣಂ ಸುಕವಿಶುಕಂ' ಎಂದು ಓದುತ್ತಾರೆ. ಅಂದರೆ, ಸುಕವಿಶುಕನು ಹುಟ್ಟಿದ್ದು ಏಕಾದಶಿ ದಿನ ಎಂಬುದು ಸ್ಪಷ್ಟ!

ಇನ್ನೊಂದು ಮಾತು. ಏಕಾದಶಿ ದಿನ ಜನಿಸಿದ ಸುಕವಿಶುಕನು ಏಕಾದಶಿ ದಿನವೇ ತೀರಿಕೊಂಡಿರಬೇಕು ಎಂದು ನಾವು ಹೇಳಿದರೆ, ಇಲ್ಲವೆಂಬರಾರು?



# ಹೀಗೂ ಮಾತನಾಡುತ್ತಾರೆ !

---

"ಬರಬರುತ್ತಾ – ಇಲ್ನೋಡಿ – ಬರಬರುತ್ತಾ, ನಮ್ಮ ಹುಡುಗರಿಗೆ – ಗೊತ್ತಾಯಿತೆ ನಾನು ಹೇಳುವುದು–ನಾಲ್ಕು ಮಾತು–ಏನು–ನಾಲ್ಕುಮಾತು– ಗೊತ್ತಾಯಿತೆ–ಒಟ್ಟಿಗೆ, ನಾಲ್ಕು ಮಾತು, ತಡವರಿಸದೆ, ಸಲೀಸಾಗಿ–ಎಲ್ಲಿ– ನಾಲ್ಕು ಮಾತು ಸಲೀಸಾಗಿ, ಒಟ್ಟಿಗೆ, ಒಂದೇ ಸಮನೆ, ಮಾತನಾಡುವುದಕ್ಕೆ ಬರುವುದಿಲ್ಲವಲ್ಲಾ, ಅಂತೀನಿ, – ಅಲ್ಲವ್ರೋ ಹೇಳಿ – ಗೊತ್ತಾಯಿತೆ ನಾನು ಹೇಳುವುದು ?"

"ಅಂದಹಾಗೆ, ಯಾವುದೋ ಗಾದೆ ಹೇಳಿದಹಾಗೆ ಆಗಿಹೋಗಿದೆ, ನಿಜ. ಸ್ಕೂಲು ಹುಡುಗರಂತೂನೂ, ಅಯ್ಯೋ ಅಯ್ಯೋ ಅಯ್ಯೋ ......."

"ಇಲ್ನೋಡಿ–ಸ್ಕೂಲು ಹುಡುಗರು ಮಾತ್ರ ಅಂತೀರೋ–ಗೊತ್ತಾಯಿತೆ ನಾನು ಹೇಳುವುದು–ಕಾಲೇಜಲ್ಲೂ ಕೂಡ–ಅಲ್ಲವ್ರೋ ಹೇಳಿ–ಎಲ್ಲಿ–ಗೊತ್ತಾ ಯಿತೆ–ಕಾಲೇಜಲ್ಲೂ ಕೂಡ-ಯಾರು-ಬಿ.ಎ., ಗಿ.ಎ ಪಾಸು ಮಾಡುತ್ತಾರಲ್ಲಾ– ಯಾವ–ದೊಡ್ಡ ದೊಡ್ಡ ವಿದ್ವಾಂಸರೂ ಕೂಡ–ಅಲ್ಲವ್ರೋ ಹೇಳಿ–ಎಂ.ಎ., ಗಿಮ್ಮೆ ಮಾಡಿದವರೂ ಕೂಡ–ಗೊತ್ತಾಯಿತೆ–ಒಂದು ವಿಷಯವನ್ನ ಮತ್ತೊಬ್ಬ ರಿಗೆ ತಿಳಿಸಬೇಕಾದರೆ–ಅಲ್ಲವ್ರೋ ಹೇಳಿ–ಯಾರಿಗೆ–ಮತ್ತೊಬ್ಬರಿಗೆ ......."

"ಅಂದಹಾಗೆ–ಹೌದು, ಹೌದು, ಯಾವುದೋ ಗಾದೆ ಹೇಳಿದಹಾಗೆ ಆಗಿಬಿಟ್ಟಿದೆ ಸಮಾಚಾರ. ಅಂತೂನೂ, ಅಯ್ಯೋ ಅಯ್ಯೋ ಅಯ್ಯೋ ..."

"ಎಷ್ಟರಮಟ್ಟಿಗೆ ಆಗಿದೆ, ಅಂತೀರೋ–ಇಲ್ನೋಡಿ–ನಾನು ಹೇಳು ವುದು–ಒಂದು ಸಂಗತಿಯನ್ನ ಮತ್ತೊಬ್ಬರಿಗೆ–ಗೊತ್ತಾಯಿತೆ–ಮತ್ತೊಬ್ಬರಿಗೆ ಹೇಳಬೇಕಾದರೆ–ಅಲ್ಲವ್ರೋ ಹೇಳಿ–ಎಷ್ಟು ನಿಧಾನ ಮಾಡುತ್ತಾರೆ–ಯಾರು– ಇವರು–ಗೊತ್ತಾಯಿತೆ–ಈಚೀಚಿನ ಹುಡುಗರು .. ..."

"ಗೊತ್ತಾಗದೆ ಏನು, ಸ್ವಾಮಿ. ಅಯ್ಯೋ ಅಯ್ಯೋ ಅಯ್ಯೋ– ಅಂತೂನೂ, ಯಾವುದೋ ಗಾದೆ ಹೇಳುತ್ತಾರಲ್ಲಾ ಹಾಗೆ–ನಮ್ಮನ್ನು ನೋಡಿ ಯಾದರೂ, ಇದ್ದ ವಿಷಯವನ್ನು ಬೇಗ ಹೇಳಿ ಮುಗಿಸುವುದಕ್ಕೆ, ಇವರು...."

"ಕಲಿತುಕೊಳ್ಳಬಾರದೆ, ಅಂತೀರೋ–ಇಲ್ನೋಡಿ–ಎಲ್ಲಿ ಸ್ವಾಮಿ–ಅಷ್ಟು ವಿನಯ–ಅಲ್ಲವೋ ಹೇಳಿ–ಯಾವುದು–ಅಷ್ಟು ಮರ್ಯಾದೆ–ಯಾರಿಗೆ–ಇವರಿಗೆ–ಗೊತ್ತಾಯಿತೆ ನಾನು ಹೇಳುವುದು–ಈ ಬಿ.ಎ., ಎಂ.ಎ ಗಳಿಗೆ........"

"ಹೌದು, ಹೌದು, ನಿಜ ನೀವು ಹೇಳುವುದು. ಅಂತೂನೂ, ಯಾರೋ ಒಬ್ಬರು ಗಾದೆ ಹೇಳಿದಹಾಗೇನೆ. ತುಂಬಾ ನಿಧಾನ ಈಚಿನವರು ಮಾತಿನಲ್ಲಿ–ಅಯ್ಯೋ ಅಯ್ಯೋ ಅಯ್ಯೋ–ಯಾವುದೋ ಗಾದೆ ಹೇಳಿದಹಾಗೆ–ಯಾವುದೋ ಸುತ್ತಿ ಎಲ್ಲಿಗೋ ಬಂದಹಾಗೆ–ಅಂತೂನೂ ......."

"ಅದಕ್ಕೇ ನಾನು ಗೋಳಾಡುತ್ತಿರುವುದು–ಅಲ್ಲವೋ ಹೇಳಿ–ಗೊತ್ತಾಯಿತೆ ನಾನು ಹೇಳುವುದು – ಅಷ್ಟು ಹೊತ್ತಿನಿಂದ – ಇಲ್ನೋಡಿ – ಅದನ್ನೇ ಹೇಳುತ್ತಾ ಇದೇನೆ–ಅಲ್ಲವೋ ಹೇಳಿ–ಸ್ವಲ್ಪದರಲ್ಲಿ ಹೇಳಿ ಮುಗಿಸಬೇಕಾದ್ದಕ್ಕೆ–ಇಲ್ನೋಡಿ–ಇವರು–ಯಾರು–ಈ ಬಿ.ಎ., ಎಂ.ಎ. ಗಳು–ಹೇಗೆ–ಮಾರುದ್ದ ಮಾತನಾಡುತ್ತಾರಲ್ಲಾ – ಗೊತ್ತಾಯಿತೆ – ಬೇಗ ಬೇಗ – ಏನು – ಬೇಗ ಬೇಗ ಹೇಳಿ ತೀರಿಸಬಾರದೆ, ಅಂತೀನಿ–ಅಲ್ಲವೋ ಹೇಳಿ–ಗೊತ್ತಾಯಿತೆ........"

"ಅಯ್ಯೋ ಅಯ್ಯೋ ಅಯ್ಯೋ–ನನಗೂ ನಿಮಗೂ ಗೊತ್ತಾಗಿ ಫಲವೇನು? ಅಂತೂನೂ, ಯಾವುದೋ ಗಾದೆ ಹೇಳಿದಹಾಗೆ. ಅಷ್ಟೆ. ತಾವು ಹೇಳಿದರಲ್ಲಾ, ನಿಧಾನ, ಸಾವಕಾಶ, ಅಂತ, ಅದನ್ನ ಯಾರು ಮಾಡುತ್ತಾರೋ, ಅವರು ......."

"ಈಗಿನ ಕಾಲದ ವಿದ್ಯಾವಂತರು, ಅಲ್ಲವೋ ಹೇಳಿ."

"ಅಂದಹಾಗೆ, ಅವರು ತಿಳಿದರೆ ಕ್ಷೇಮ! ಅಂತೂನೂ, ಅವರು ತಿಳಿದುಕೊಳ್ಳಬೇಕಾದರೆ,–ಅಯ್ಯೋ ಅಯ್ಯೋ ಅಯ್ಯೋ–ಎಷ್ಟು ಕಷ್ಟ, ಎಷ್ಟು ಕಷ್ಟ. ಯಾವುದೋ ಗಾದೆ ಇದೆ ಅಲ್ಲ, ಹಾಗೆ........"

"ಅಲ್ಲವೋ ಹೇಳಿ."



**ಗಮನಿಸಿರಿ !** **ಮರೆತೀರಿ !!**

● ನೀವು ನಿಮ್ಮ ಆಶ್ರಿತರ ರಕ್ಷಣೆಗಾಗಿಯೂ, ವೃದ್ಧಾಪ್ಯದಲ್ಲಿ
ಸುಖಪಡುವುದಕ್ಕೂ ಆಪದ್ಧನವನ್ನು ಕೂಡಿಡಬೇಕಲ್ಲವೆ ?

**ಹಾಗಾದರೆ ಇಂದೇ**

ಮೈಸೂರು ಸರಕಾರದ
ಇನ್ಷೂರೆನ್ಸ್ ಡಿಪಾರ್ಟ್‌ಮೆಂಟಿನಲ್ಲಿಯೇ

# ವಿಮೆ ಮಾಡಿರಿ

**ಏಕೆಂದರೆ ?**

● ಈ ವಿಮಾ ಹಣಕ್ಕೆ ಮೈಸೂರು ಸರ್ಕಾರದ
ರೆವಿನ್ಯೂ ಹುಟ್ಟುವಳಿಯೇ ಆಧಾರ.



**ಕೆ. ಎಸ್. ನರಸಿಂಹಮೂರ್ತಿ,**
ಹೆಲ್ಪರ್,
997, ಮೈಸೂರು ಸರ್ಕಾರದ ಇನ್ಷೂರೆನ್ಸ್ ಡಿಪಾರ್ಟ್‌ಮೆಂಟ್,
ಶೇಷಾಲಯ ಬಡಾವಣೆ, ಮಂಡ್ಯ.

# ನಮ್ಮ ಗ್ರಂಥಮಾಲೆಯ ಪೋಷಕರು

---

೧. ಶ್ರೀಮತಿ ಇಂದಿರಾಬಾಯಿ ರಾಘವೇಂದ್ರರಾವ್, ಮಂಡ್ಯ.
೨. ಶ್ರೀಮಾನ್ ಎಂ. ಬಿ ಆಳ್ವಾರಯ್ಯಂಗಾರ್, ಗುಡಿಬೀದಿ, ಮಂಡ್ಯ.
೩. ,, ಜೆ. ದೇವಯ್ಯ, ಜಮೀನ್‌ದಾರ್,
ಆರ್. ಎ. ಮೆಂಬರು, ಮಂಡ್ಯ.
೪. ,, ಎಸ್. ವಿ. ಸೂರ್ಯನಾರಾಯಣರಾವ್,
ಶ್ಯಾನುಭೋಗ್, ಮಂಡ್ಯ.
೫. ,, ಬಿ. ಎಸ್. ನಾಗಪ್ಪ, ಲೇಖಕರು, ಮಂಡ್ಯ.
೬. ,, ಜೆಡೆ ರಂಗರಾವ್, ಬಿ.ಎ., ಎಲ್.ಎ.ಜಿ.,
ಸಕ್ಕರೆ ಕಾರ್ಖಾನೆ, ಮಂಡ್ಯ.
೭. ,, ಜಿ. ನರಸಿಂಹಯ್ಯ, ಕಂಟ್ರಾಕ್ಟರ್, ಮಂಡ್ಯ.
೮. ,, ಎಂ. ಸಿ. ಮಾದಯ್ಯ, ಜಮೀನ್‌ದಾರ್, ಮಂಡ್ಯ.
೯. ,, ಎನ್. ಕಸ್ತೂರಿ, ಎಂ.ಎ., ಬಿ.ಎಲ್.,
ವಿಶ್ವವಿದ್ಯಾನಿಲಯ, ಮೈಸೂರು.
೧೦. ,, ಟಿ. ಕೃಷ್ಣಮೂರ್ತಿ, ಎಂ.ಎ.,
ವಿಶ್ವವಿದ್ಯಾನಿಲಯ, ಮೈಸೂರು.
೧೧. ,, ಜಿ. ಬಿ. ಮಲ್ಲಾರಾಧ್ಯ, ಟ್ರೆಜರಿ ಆಫೀಸ್, ಕೋಲಾರ.
೧೨. ,, ಬಿ. ಎನ್. ರಂಗಸ್ವಾಮಿ, ವ್ಯವಸ್ಥಾಪಕ,
ಉಣ್ಣೇಕೇಂದ್ರ, ಕೋಲಾರ.
೧೩. ,, ಬಿ. ಆರ್. ಗೋಪಾಲಕೃಷ್ಣಯ್ಯ,
ಜಮೀನ್‌ದಾರ್, ಬೂದನೂರು.
೧೪. ,, ಜಿ. ವಿ. ಕೃಷ್ಣಪ್ಪ, ಶ್ಯಾನುಭೋಗ್, ಗುತ್ತಲು.
೧೫. ,, ಜಿ. ವಿ. ಸೀತಾರಾಂ, ಉಪನ್ಯಾಸಕರು,
ಹಿಂದೀಶಿಕ್ಷಕ ವಿದ್ಯಾಲಯ, ಧಾರವಾಡ.

---